# ಸಮಾಜದ ಗೋಳು

( ಸಾಮಾಜಿಕ ಸಣ್ಣ ನಾಟಕ )

# ಅಮೃತವಾಣಿ



೧೦೦೦ ಪ್ರತಿಗಳು

ಬರೆದವರು :

**ಹ. ಮ. ದಾಮೋದರ** ದೇವೀಹೊಸೂರ

ಪ್ರಕಾಶಕರು :

**ಎಸ್. ಕೊರ್ಲಹಳ್ಳಿ**

ಸಂಪಾದಕ:— "ಸರ್ವೋದಯ" ಮಾಸಪತ್ರಿಕೆ

ಬೆಲೆ :

**ಒಂದು ರೂಪಾಯಿ**

## ಅರ್ಪಣ



ವಿದ್ಯಾಭಿಮಾನಿಗಳೂ ಸರಳಸ್ವಭಾವದವರೂ ಸುಶಿಕ್ಷಿತರೂ ಊರ ಹಿರಿಯರೂ ಬಡವಿದ್ಯಾರ್ಥಿಗಳ ಪ್ರೇಮಿಗಳೂ ಸಮಾಜ ಸೇವಕರೂ ಬಡ ವಿದ್ಯಾರ್ಥಿಗಳಿಗೆ ಧನಸಹಾಯಮಾಡಿ ಉಚ್ಚಶಿಕ್ಷಣ ಪಡೆಯಿಸಿದವರೂ ನಾಡಿನ ಅಧೋಗತಿಯ ಹೀನಕೃತ್ಯಗಳನ್ನು ಹೋಗಲಾಡಿಸಲು ಹೆಣಗಿ ಯಶಸ್ವಿಗಳಾಗಿ ಸದಾ ನನ್ನ ಹೆಚ್ಚಳವನ್ನು ಬಯಸುತ್ತಿದ್ದ ಮತ್ತು ಈಗ ಕೈಲಾಸವಾಸಿಗಳಾಗಿಯೂ ನನ್ನನ್ನು ನಾಡಿನ ಅಧೋಗತಿಯ ದರಿದ್ರ ಹೀನಕೃತ್ಯಗಳನ್ನು ಹೋಗಲಾಡಿಸಲು ಪ್ರೇರಿಸುತ್ತಿದ್ದ ನನ್ನ ನಲುಮೆಯ ಮಾವಂದಿರಾದ ತಿ. ರಾ. ರಾ. ತಿರಕಪ್ಪ ಸಂಕಪ್ಪ ಕುಂಠೆ ಅವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕವಾಗಿ ಈ "ಮೊಗ್ಗೆ"ಯು ಅರ್ಪಿತ.

ಡಿ. ಹನುಮಂತರಾಯರು

## ಇದೇ ಲೇಖಕರ ಬೇರೆ ಪುಸ್ತಕಗಳು
## ಬೇಗನೆ ಪ್ರಕಟವಾಗಲಿವೆ

"ಕಲ್ಲುಸಕ್ಕರೆ" ( ಕವನಗಳ ಸಂಕಲನ )

"ಚಂದ್ರಮತಿ" ( ಕಥಾ ಸಂಕಲನ )

"ಟ್ರೇನಿಂಗ ಕಾಲೇಜು" ( ಏಕಾಂಕ ನಾಟಕ )

——×——



ಮುದ್ರಕರು :

**ಶ್ರೀ ಕೆ. ಜಿ. ತಾಪಸ,** ಬಿ. ಎ.

ಸುಧಾ ಪ್ರಿಂ. ಪ್ರೆಸ್, ಹುಬ್ಬಳ್ಳಿ

# ನಲ್ನುಡಿ

★

ನಮ್ಮ ಕಾಲೇಜಿನ ಒಂದನೆಯ ವರುಷದಲ್ಲಿ ತರಬೇತಿ ಹೊಂದುತ್ತಿರುವ ನಚ್ಚಿನ ಶಿಕ್ಷಕ-ವಿದ್ಯಾರ್ಥಿ ಶ್ರೀ ಹ. ಮ. ದಾಮೋದರ ಎಂಬವರು ತಾವು ಬರೆದ "ಸಮಾಜದ ಗೋಳು" ಎಂಬ ಒಂದು ಸಣ್ಣ ನಾಟಕವನ್ನು ತಂದು ಅದಕ್ಕೊಂದು ಚಿಕ್ಕ ಮುನ್ನುಡಿಯನ್ನು ಬರೆಯಲು ಕೇಳಿಕೊಂಡರು. ಭಕ್ತಿ-ವಿಶ್ವಾಸಗಳಿಂದ ಕೈಯಲ್ಲಿಟ್ಟ ಅವರ ಈ ಚಿಕ್ಕ, ಮನೆಯ ಮಲ್ಲಿಗೆಯಂತಿದ್ದ ನಾಟಕವನ್ನು ಅಷ್ಟೇ ಸ್ನೇಹಭಾವದಿಂದ ಕೈಯಲ್ಲಿ ತೆಗೆದುಕೊಂಡೆ. ಹೊಸದಾಗಿ ಹಡೆದ ತನ್ನ ಮುದ್ದಿನ ಮಗುವನ್ನು ತಂದೆಯ ಕೈಗೆ ಕೊಡುವಾಗ ಅದಾವ ತಂದೆಯು ಆ ಕೂಸನ್ನು ಎತ್ತಿ ಮುದ್ದಾಡಲಿಕ್ಕಿಲ್ಲ! ಅಂತೆಯೇ ಅದನ್ನು ಅತ್ಯಂತ ಒಲುಮೆಯಿಂದ ತೆರೆದು, ಸಹಾನುಭೂತಿಯಿಂದ ತಿರುವಿ ಕಕ್ಕುಲತೆಯ ಕಣ್ಣಿನಿಂದ ಓದಿದೆನು; ಸಂತೋಷವಾಯಿತು. ಆದುದರಿಂದ ತಾಯ್ನುಡಿಯು ತೊದಲು ಮಾತಿನಂತಿರುವ ಈ ಚಿಕ್ಕ ಪ್ರಹಸನದ ಬಗೆಗೆ ನಲುಮೆಯ ನುಡಿಗಳ ರೂಪದಿಂದ ಈ ನಾಲ್ಕು ನಲ್ನುಡಿಗಳನ್ನಾಡಲು ತೊಡಗಿದ್ದೇನೆ.

ತರುಣರಾದ ಶ್ರೀ ದಾಮೋದರ ಅವರ ಎದೆಯಲ್ಲಿ ರಸಿಕತೆಯ ಚಿಲುಮೆಯಿದೆ; ಅದಕ್ಕೆ ಸಹಾನುಭೂತಿಯ ಮಾರ್ಗಕೊಟ್ಟರೆ, ಪ್ರೋತ್ಸಾಹದ ಗತಿಯನ್ನು ತೊಡಸಿದರೆ, ಅದು ಜೀವಂತ ಝರಿಯಾಗಿ ಹರಿದು ಸಹೃದಯರಾದ ಕನ್ನಡಿಗರ ವಿಶಾಲವಾದ ರಂಗಭೂಮಿಯ ಸೇವೆಯನ್ನು ಮಾಡಬಲ್ಲದೆಂಬ ಭರವಸೆ ಅವರ ಈ ಚಿಕ್ಕ ನಾಟಕದಿಂದ ಮೂಡಿಬರುವಂತಿದೆ. ಸಮಾಜದಲ್ಲಿ ಇದೀಗ ಕಂಡುಬರುವ ಕೆಲಲೋಪದೋಷಗಳ ಸರಳವಾದ, ಸಂಕ್ಷೇಪವಾದ, ಚಿತ್ರಣ ಈ ನಾಟಕದಲ್ಲಿ ಕಂಡುಬರುವದು. ಕುಡಿಯುವದು, ರೊಕ್ಕದಾಟವಾಡುವದು, ಗಾಂಜೀಸೇದುವದು, ಅಕ್ರಮವಾಗಿ ಸೆರೆ ಮೊದಲಾದ ಮಾದಕಪೇಯಗಳನ್ನು ತಯಾರಿಸುವುದು ಮೊದಲಾದ ದುಶ್ಚಟಗಳಿಗೆ ಬಲಿಬಿದ್ದು ತಮ್ಮ ಮನೆಮಾರು, ಆಸ್ತಿಪಾಸ್ತಿಗಳನ್ನೆಲ್ಲ ತೂರಿ ಬೀದಿಯ ಭಿಕಾರಿಗಳಾಗಿ ಸಮಾಜಕಂಟಕರಾಗಿ, ಬಡತನದ ಪೆಡಂಭೂತಗಳಾಗಿ ತಿರುಗುವ

ದರಿದ್ರರ ಕೆಲ ದೃಶ್ಯಗಳೇ ಈ ನಾಟಕದ ಚಿತ್ರಣಕ್ಕೆ ಹಿನ್ನೆಲೆಯಾಗಿವೆಯೆಂದು ಧಾರಾಳವಾಗಿ ಹೇಳಬಹುದು.

ಅಜ್ಞಾನ-ಬಡತನಗಳ ಮುಂಗಮುಷ್ಟಿಯಲ್ಲಿ ಸಿಕ್ಕುಬಿದ್ದ ನಮ್ಮ ಇಂದಿನ ಸಮಾಜವು ಇಂಥ ಜನರ ಉಪಟಳದಿಂದಾಗಿ ನೆಮ್ಮದಿಯನ್ನು ಕಳೆದು ಕೊಳ್ಳಹತ್ತಿರುವುದೇನೋ ಖಚಿತವಾದ ಮಾತು. ನಾಡಿನ ಏಳ್ಗೆಗೆ ಇದು ಹೆಮ್ಮಾರಿ, ದುಷ್ಟಟಗಳಿಗೆ ಮಾರುಹೋದ ಹಳ್ಳಿಯ ಬಡಕುಟುಂಬಿಗರು ಪಡು ತ್ತಿರುವ ಕಷ್ಟಕಾರ್ಪಣ್ಯಗಳನ್ನು ಈ ನಾಟಕದ ದೃಶ್ಯಗಳಲ್ಲಿ ತಮ್ಮದಾದ ರೀತಿ ಯಲ್ಲಿ ಚಿತ್ರಿಸಲು ಶ್ರೀ ದಾಮೋದರರವರು ಪ್ರಯತ್ನಪಟ್ಟಿದ್ದಾರೆ. ಆ ದುಷ್ಟ ಟಗಳ ದವಡೆಯಿಂದ ಬಡಜನರನ್ನು ಬಿಡಿಸಿ ಅವರನ್ನು ಸನ್ಮಾರ್ಗದತ್ತ ಸಾಗಿ ಸುವ ಹೊಣೆಹೊತ್ತ ದೇಶಭಕ್ತ ಭಾಬುರಾಯನ ಪಾತ್ರವು ಈ ನಾಟಕ ದುದ್ದಕ್ಕೂ ನಮ್ಮ ಮನಸ್ಸಿನಲ್ಲಿ ಮೂಡಿನಿಲ್ಲುತ್ತದೆ. ಅಂಥ ವ್ಯಕ್ತಿಗಳು ಮಾತ್ರ ನಾಡತಾಯಿಯ ಸೇವೆಯನ್ನು ಮಾಡಲು ಯೋಗ್ಯರೆಂಬ ಮಾತು ಓದುಗರಿಗೆ ಹೊಳೆಯದಿರದು. ಅಂಥ ಕಳಕಳಿಯ ಸಮಾಜ ಸುಧಾರಕರೇ ನಿಜವಾದ ದೇಶಭಕ್ತರು. ಅವರೇ, ಸಮಾಜದಲ್ಲಿ ಬೀಡುಬಿಟ್ಟ ಕತ್ತಲೆಯ ಮೊತ್ತವನ್ನು ಕರಗಿಸಿ ಹೊರದೂಡುವ ಜೀವಂತ ಜ್ಯೋತಿಗಳು ಎಂಬ ಭಾವನೆ ನಾಟಕದ ಕೊನೆಗೆ ಸ್ಪಷ್ಟವಾಗುತ್ತದೆ.

ನಮ್ಮ ರಾಷ್ಟ್ರೀಯ ಸರಕಾರದವರು ಬಳಕೆಯಲ್ಲಿ ತಂದ ಪಾನನಿರೋಧ ಯೋಜನೆಯು ಇನ್ನೂ ಹೇಳಿಕೊಳ್ಳುವಷ್ಟು ಯಶಸ್ವಿಯಾಗದಿರುವದರ ಒಳ ಗುಟ್ಟನ್ನು ಕುರಿತು ಕೆಲವು ಮಹತ್ವದ ಸತ್ಯಾಂಶಗಳನ್ನು ಈ ನಾಟಕದಲ್ಲಿ ಚಿತ್ರಿಸ ಲಾಗಿದೆ. ಈ ಪಾನಪ್ರತಿಬಂಧಕ ಯೋಜನೆಯು ಯಶಸ್ವಿಯಾಗಲು ಜನತೆಯ ಸಹಕಾರವೂ ಬೇಕು. ಅಧಿಕಾರಿಗಳ ತತ್ವನಿಷ್ಠೆ, ಕರ್ತವ್ಯದಕ್ಷತೆಗಳೂ ಬೇಕು ಎಂಬಂಶವನ್ನು ಇಲ್ಲಿ ಸೂಕ್ಷ್ಮವಾಗಿ ತೋರಿಸಿಕೊಟ್ಟಿದ್ದಾರೆ. ಅಲ್ಲದೆ ಕುಡುಕ ತನವನ್ನು ಬಿಟ್ಟು ಸರಳಮಾರ್ಗಾನುಗಾಮಿಯಾದ ಗುಂಡೂರಾಯನಂತ ವನೂ ಸಹ ಸಮಾಜ ಸೇವೆಗೆ ಕಂಕಣಬದ್ಧನಾಗಿ ನಿಲ್ಲುವುದಕ್ಕೆ ಅವನ ಹೆಂಡತಿ ಯಾದ ಹಳ್ಳಿಯ ಸಾಧ್ವಿ ಬಂಗಾರೆವ್ವನಂಥ ಮಹಿಳೆಯರು ನಮ್ಮ ಹಳ್ಳಿಯಲ್ಲಿರು ವರೆಂಬುದು ಹೆಮ್ಮೆಯ ವಿಷಯ. ಇಂಥ ಹೆಣ್ಣುಮಕ್ಕಳೇ ತಮ್ಮ ತಾಳ್ಮೆ, ಸರಳ

ತನ, ಶೀಲ ಮೊದಲಾದವುಗಳಿಂದ ಸಮಾಜವನ್ನು ಸನ್ಮಾರ್ಗದಲ್ಲಿ ನಿಲ್ಲಿಸಬಲ್ಲ ರೆಂಬ ಮಾತು ಸತ್ಯವಾಗುವಂತೆ ತೋರಿಸಲಾಗಿದೆ.

ಹೀಗೆ ಸಮಾಜದ ನಾನಾಬಗೆಯಾದ ಗೋಳನ್ನು ಚಿತ್ರಿಸಿ ದುಶ್ಚಟಗಳಿಗೆ ಬಲಿಬೀಳುವ ಭಾಗ್ಯಹೀನರ ದೀನ ಜೀವನವನ್ನು ಸರಳವಾದ ಹಳ್ಳಿಯ ನುಡಿಯಲ್ಲಿಯೇ ಚಿತ್ರಿಸಲೆತ್ನಿಸುವ ಈ ಚಿಕ್ಕ ಪ್ರಯತ್ನವು ಸಾಕಷ್ಟು ಯಶಸ್ವಿಯಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಶ್ರೀ ದಾಮೋದರ ಅವರು ತರುಣರಾದರೂ ಈ ನಾಟಕದಲ್ಲಿ ತಮ್ಮದೇ ಆದ ಅನುಭವದ ತೊರೆಯನ್ನು ಹರಿಸಿದ್ದಾರೆಂದು ಹೇಳಬಹುದು. ಈ ತೊರೆಯಲ್ಲಿ ತೇಲಿಬರುವ ನೀರೆಲ್ಲ ತಿಳಿಯಾದುದೆಂದೂ, ಕುಡಿಯಲರ್ಹವಾದುದೆಂದೂ ಹೇಳುವ ಸಾಹಸಕ್ಕೆ ನಾನು ಹೋಗುವದಿಲ್ಲ. ಆದರೆ ಆ ಚಿಕ್ಕದಾದ ಅನುಭವಝರಿಯ ಬದಿಗಿರುವ ಮಳಲ ತಡಿಯಲ್ಲಿ ಸಹಾನುಭೂತಿಯಿಂದ ತೆಗೆದ ಚಿಕ್ಕ ಒರತಿಯೊಳಗಿನ ಕಲಕು ನೀರನ್ನು ತೆಗೆದು ತಿಳಿಯಾದ ಜಲವನ್ನೀಂಟುವಂತೆ ಓದುಗರು ಸಹೃದಯತೆಯನ್ನು ತೋರಬೇಕೆಂದು ಕೋರುವೆನು. ಸಾಹಿತ್ಯರಂಗದಲ್ಲಿ ತಪ್ಪುಡಿಗಳನ್ನಿಡುತ್ತಿರುವ ನನ್ನ ನಲುಮೆಯ ಶಿಷ್ಯರಾದ ಶ್ರೀ ದಾಮೋದರ ಅವರಲ್ಲಿ ಅಂಕುರವಾಗಿದ್ದ ಈ ಕಲಾಭಿರುಚಿಯು ಬೆಳೆದು ಮರವಾಗಲೆಂದು ಹಾರೈಸುವೆನು.

**ಎಸ್. ಡಿ. ಇಂಚಲ**

ಪ್ರಿನ್ಸಿಪಾಲರು ಗಂ. ಮ. ಟ್ರೇ. ಕಾ. ಹುಬ್ಬಳ್ಳಿ

# ಪ್ರಕಾಶಕರ ಮಾತು

★

ಶ್ರೀಮಾನ್ ಹ. ಮ. ದಾಮೋದರ ಅವರು ನೌಕರಿಯೇ ತಮ್ಮ ಧ್ಯೇಯವನ್ನಾಗಿಟ್ಟುಕೊಂಡಿದ್ದರೂ ಅದರ ಜೊತೆಯಲ್ಲಿ ವಿದ್ಯಾರ್ಜನೆಯ ದಾರಿಯಲ್ಲಿರುವದನ್ನು ಕಂಡು ನನಗೆ ತುಂಬಾ ಆನಂದವಾಗುತ್ತದೆ. 'Learn while you earn' ಎಂಬುದು ಇಂಥವರಿಂದ ಪುಷ್ಟಿಯನ್ನು ಪಡೆಯುತ್ತದೆಂದು ಅನ್ನಲು ಆದಾವ ಸಂಕೋಚ ! ಇದಕ್ಕಿಂತಲೂ ಒಂದು ಹೆಜ್ಜೆ ಮುಂದಿಟ್ಟವರೆಂದು ಸರ್ವರಿಗೂ ತಿಳಿಸಲು ನನ್ನಿಂದ ಪ್ರಕಾಶನ ಪಡೆದ ಅವರ ಈ ಹೊತ್ತಿಗೆಯೇ ಸಾಕ್ಷಿಯಾಗಿದೆ. ನಾಟಕರಚನಾ ಕಲೆಯಲ್ಲಿ ಅಡಗಿದ ಶ್ರೀ ದಾಮೋದರರವರ ಹಿಂಮೆ ಸ್ತುತ್ಯವಾದುದು.

ಶ್ರೀ ದಾಮೋದರವರು ತರುಣ ಸಾಹಿತಿಗಳು. ಅವರು ರಸಿಕರು, ತಿಳಿಹಾಸ್ಯಕಾರರು, ಒಳ್ಳೇ ಹುರುಪಿನವರು ಇರುವರೆಂದು ಹೇಳುವ ಮಾತು ಅವರ ಹಾಸ್ಯರಸಮಯವಾದ ಹೊತ್ತಿಗೆಯೇ ನನಗಿಂತ ಮೊದಲು ಹೇಳುತ್ತದೆ. ಅಲ್ಲದೆ ಆಧ್ಯಾತ್ಮಿಕ ಕವನ ರಚನಾತ್ಮಕರೂ ಇರುವರೆಂಬ ಮಾತು ನಮ್ಮ ಪತ್ರಿಕೆಯೇ ಸಾಕ್ಷಿ. ಸಮಾಜದಲ್ಲಿಯ ಹೀನ ಕೃತ್ಯವನ್ನು ಹಾಸ್ಯರಸದಲ್ಲಿಯೇ ಹೊಡೆದೋಡಿಸಿದ್ದಾರೆ. ಭಗವಾನನು ಅವರಿಗೆ ಸಮಾಜೋದ್ಧಾರದ ವಿಷಯವನ್ನೇ ಬರೆಯಲು ಇನ್ನಿಷ್ಟು ಪುಷ್ಟಿಕೊಡಲೆಂದು ಬೇಡಿಕೊಳ್ಳುತ್ತೇನೆ.

ಮತ್ತು ಈ ಹೊತ್ತಿಗೆಯಲ್ಲಿಯ ಮಹಾತ್ಮರ ಅಮೃತವಾಣಿಗಳನ್ನು ಓದಲಾಗಿ ಪ್ರತಿಯೊಬ್ಬ ಮಾನವನನ್ನು ಸಗ್ಗದ ಹೆದ್ದಾರಿಯ ಕಡೆಗೆ ಒಯ್ಯುತ್ತವೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಮಾನವ ಜನ್ಮದ ಉದ್ಧಾರಕ್ಕಾಗಿ ಪ್ರಯತ್ನಪಟ್ಟ ಶ್ರೀ ದಾಮೋದರರು ಓದುಗರ ಕೃತಜ್ಞತೆ ಸಲ್ಲಿಸಿಕೊಳ್ಳಲಿಕ್ಕೆ ಅರ್ಹರೆಂದು ಬೇರೆ ಹೇಳಬೇಕಾಗಿಲ್ಲ. ಇದರಲ್ಲಿಯ ಒಂದೊಂದು ಅಮೃತವಾಣಿಗಳು ಆರಿಸಿ ತೆಗೆದಿಟ್ಟ ಮುತ್ತು, ಮಾಣಿಕವೆಂದು ಧಾರಾಳವಾಗಿ ಹೇಳಬಹುದು. ಶಾಲೆಯಲ್ಲಿಯ ಈಗಿನ ಹೊಸ ಸಕ್ಯೂಲರ ಪ್ರಕಾರ ಪ್ರತಿಯೊಬ್ಬ ಶಿಕ್ಷಕ-ಶಿಕ್ಷಕಿಯರಿಗೆ ನಿತ್ಯೋಪಯೋಗಿಯಾಗಿವೆ ಎಂದು ನನ್ನ ನಂಬಿಕೆ! ಆ

ಪ್ರಕಾರ ಉಪಯೋಗಮಾಡಬೇಕೆಂದೂ ನನ್ನ ಬೇಡಿಕೆ! ಶ್ರೀ ದಾಮೋದರರವರ ಉತ್ಸಾಹ ಈಡೇರಲೆಂದು ಭಗವಾನನಲ್ಲಿ ನನ್ನ ಕೋರಿಕೆ.

ಮತ್ತು ಬೇಗನೇ ಪ್ರಕಟವಾಗಲಿರುವ ಅವರ ಮೂರು ಪುಸ್ತಕಗಳು ಓದುಗರ ಮನಸ್ಸನ್ನು ಆಕರ್ಷಣಮಾಡಿಕೊಳ್ಳುವಂತಹವುಗಳಿವೆ. ಒಂದನೆಯದು "ಕಲ್ಲುಸಕ್ಕರೆ" ಇದು ಕವನಗಳಿಂದ ಕೂಡಿದ್ದು. ಎಲ್ಲ ಕವನಗಳು ಒಳ್ಳೇ ಸ್ಫೂರ್ತಿದಾಯಕಗಳಿವೆ. ಅವೆಲ್ಲ ಕವನಗಳನ್ನು ಓದುವದರಿಂದ ಕಲ್ಲುಸಕ್ಕರೆಯನ್ನು ತಿಂದಷ್ಟು ರುಚಿಯಾಗಿ ಮನಸ್ಸು ಆನಂದವಾಗುತ್ತದೆ. ಎರಡನೆಯದು "ಚಂದ್ರಮತಿ" ಇದು ಕಥೆಗಳಿಂದ ಕೂಡಿದ್ದು. ಎಲ್ಲ ಕಥೆಗಳು ಕೌಟುಂಬಿಕ ಮಾರ್ಗದರ್ಶಕವಾಗಿವೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಕಥೆಗಳಲ್ಲಿ ಶ್ರೀ ದಾಮೋದರರು ತಮ್ಮದೇ ಆದ ಪ್ರಾಪಂಚಿಕ ಅನುಭವ ಧುರಿಯನ್ನೇ ಹರಿಯಿಸಿದ್ದಾರೆ. ಮೂರನೆಯದು "ಟ್ರೇನಿಂಗ ಕಾಲೇಜ" ಇದು ಏಕಾಂಕ ನಾಟಕವಿದ್ದು, ತರಬೇತಿಯಲ್ಲಿ ಜೀವನ .ವೇತನದಿಂದ ಶಿಕ್ಷಕನಿಗೆ ಆಗತಕ್ಕ ಕಷ್ಟಕಾರ್ಪಣ್ಯಗಳನ್ನೂ, ಅವನ ಕುಟುಂಬದ ಪರಿಸ್ಥಿತಿಯನ್ನೂ ಒಳ್ಳೇ ಹೃದಯಸ್ಪರ್ಶಿಯಾಗುವಂತೆ ಚಿತ್ರಿಸಲು ಶ್ರೀ ದಾಮೋದರರವರು ಪ್ರಯತ್ನ ಪಟ್ಟು ಅದರಲ್ಲಿ ಯಶಸ್ವಿಗಳಾಗಿದ್ದಾರೆಂದು ನಾನು ಧಾರಾಳವಾಗಿ ಹೇಳುತ್ತೇನೆ.

ಎಸ್. ಕೊರ್ಲಹಳ್ಳಿ
ಸಂಪಾದಕ
ಸರ್ವೋದಯ ಮಾಸಪತ್ರಿಕೆ

ಹುಬ್ಬಳ್ಳಿ

———×———

# ಅಭಿಪ್ರಾಯಗಳು

*

ಈ ತರುಣ ಮಿತ್ರರು ಬರೆದಿರುವ "ಸಮಾಜದ ಗೋಳು" ಎಂಬ ಚಿಕ್ಕ ಪ್ರಹಸನವು ಸಮಾಜದಲ್ಲಿಯ ಕೀಳುಜನರ ಜೀವನದ ಕುಂದುಕೊರತೆ. ಲೋಪದೋಷ, ದುಶ್ಚಟಗಳನ್ನು ಎತ್ತಿತೋರಿಸಿ ಅವುಗಳ ನಿವಾರಣೋಪಾಯ ವನ್ನು ಸೂಚಿಸುತ್ತದೆ. ಈ ಪ್ರಹಸನದಲ್ಲಿ ಬರುವ ಗುಂಡೂರಾಯ, ಶರಣಪ್ಪ, ಎಕ್ಕಣ್ಣಾ, ಮುಂತಾದವರ ಇಸ್ಪೇಟಿನ ಗುಂಪು, ಹಣದಾಸೆಗೆ ಬಲಿಯಾದ ಪೋಲೀಸಿನವರಿಬ್ಬರು ಇವರೆಲ್ಲರೂ ಈ ನಾಟಕದ ಸೂತ್ರಧಾರ ದೇಶಭಕ್ತ ಬಾಬುರಾಯ, ಮತ್ತು ಫೌಜದಾರರ ನೆರವಿನಿಂದ ಬಂಧಿತರಾಗುವರು. ಊರಲ್ಲಿ ಪುಂಡಾಟಿಕೆ ಕಡಿಮೆ ಆಗಿ ಅವರ ಹೆಂಡರು-ಮಕ್ಕಳು ಸುಖವನ್ನು ಕಾಣುವರು.

ಸಮಾಜವನ್ನು ಸುಧಾರಿಸಬೇಕೆಂಬ ಶ್ರೀ ದಾಮೋದರರವರ ಹಂಬಲ ಸ್ತುತ್ಯ. ಶಾಲಾ ಉತ್ಸವಗಳಲ್ಲಿ ಈ ನಾಟಕವನ್ನು ಆಡಿ ತೋರಿಸಲು ಅತಿ ಯೋಗ್ಯವಿದೆ.

ಈ ಹೊತ್ತಿಗೆಯ ಎರಡನೆಯ ಭಾಗದಲ್ಲಿ ಸೇರಿಸಿರುವ "ಅಮೃತವಾಣಿ" ಎಂಬ ವಿಭಾಗದಲ್ಲಿ ಸುಂದರವಾದ ಈ ಹೇಳಿಕೆಗಳು, ಶಾಲಾ ಬಾಲಕರಿಗೆ ಮಾರ್ಗದರ್ಶಕ ಮತ್ತು ನೀತಿದಾಯಕವಾಗಿರುವ ಈ ಹೆಸರಾಂತ ನುಡಿಗಳು, ಉತ್ತಮವಾಗಿವೆ. ಇದನ್ನು ಸಂಗ್ರಹಿಸಿದ ಇವರ ಸಾಹಸ ಮೆಚ್ಚತಕ್ಕದ್ದಾಗಿದೆ.

ಇವರದು ಇದೇ ಪ್ರಥಮ ಪ್ರಯತ್ನವಾದರೂ ಪುಸ್ತಕವು ಸಾಕಷ್ಟು ಯಶಸ್ವಿಯಾಗಲು ಪ್ರಯತ್ನಪಟ್ಟಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ದೇವರ ಕೃಪೆಯಿಂದ ಈ ನನ್ನ ಮಿತ್ರರಿಗೆ ಕಥೆ, ಕಾದಂಬರಿ, ನಾಟಕಗಳನ್ನು ಬರೆಯುವ ಕಲೆ ಸಾಧಿಸಲೆಂದು ಹಾರೈಸುತ್ತೇನೆ.

ಹುಬ್ಬಳ್ಳಿ
೧೯೫೩

ಪಿ. ವೆಂಕೋಬಾಚಾರ್ಯ ಬಿ. ಎ., ಬಿ. ಟಿ.
ಸಂಪಾದಕ:— ಆನಂದ ಗ್ರಂಥಮಾಲಾ.

'ಸಮಾಜದ ಗೋಳು' ಇದು ಶ್ರೀ ದಾಮೋದರರವರ ಪ್ರಥಮ ಪ್ರಯತ್ನ; ಇದನ್ನು ತಾವೇ ಮೊಗ್ಗೆಯೆಂದು ಕರೆದಿದ್ದಾರೆ. ಆದರೆ ನನಗೇನೋ ಓದುತ್ತ ಹೋದಂತೆ ಅರಳಿದ ಹೂವಿನಂತೆ ಸುವಾಸನೆ ಬರಹತ್ತಿತು. ಲೇಖಕರ ಕರೆಯಂತೆ ನನ್ನ ಅಭಿಪ್ರಾಯವೇನೆಂದರೆ ಇದನ್ನು ಕಸುಗಾಯಿಯೆಂದು ಕಡೆಗಣಿಸದೇ, ಹುಳಿಯೆಂದು ಹಳಿಯದೇ, ಹಳ್ಳಿಯದೆಂದು ತಳ್ಳದೇ ನೋಡಬೇಕು. ಕಸುಗಾಯಿಯಲ್ಲಿಯೂ ಒಂದು ಸ್ವಾದವಿದೆ; ಹುಳಿಯೂ ಷಡ್ರಸಗಳಲ್ಲೊಂದಿದೆ; ಹಳ್ಳಿಯದಾದರೂ ಜೊಳ್ಳಾಗಿಲ್ಲ. ಹಳ್ಳಿಯಿಂದಲೇ ದಿಳ್ಳಿಯೆಂಬಂತೆ ಹಳ್ಳಿ ಮೊದಲು ಸುಧಾರಿಸಬೇಕೆಂದು ಈ ತರುಣ ಸಾಹಿತಿಗಳು ಪ್ರಯತ್ನಪಟ್ಟಿದ್ದಾರೆ.

ಈ ಪುಸ್ತಕದ ಎರಡನೆಯ ಭಾಗವಾದ ಅಮೃತವಾಣಿ ವಿಭಾಗವು ಒಳ್ಳೇ ಸುಂದರವಾಗಿ ಹೆಣೆಯಲ್ಪಟ್ಟಿದೆ. ಒಂದೊಂದು ಅಮೃತವಾಣಿಗಳು ಒಳ್ಳೇ ನೀತಿದಾಯಕ ಮಾರ್ಗದರ್ಶಕವಾಗಿವೆ. ಕೇವಲ ಬಾಲಕರಿಗೇಕೆ ಸಮಸ್ತ ಮಾನವ ಜನಾಂಗಕ್ಕೆ ಬೋಧದಾಯಕವಾಗಿವೆ. ಇವೆಲ್ಲವುಗಳನ್ನು ಸಂಗ್ರಹಿಸಿ ಸ್ವತಃ ತಮ್ಮ ಅನುಭವಗಳಲ್ಲಿಯ ಕೆಲವು ನುಡಿಗಳನ್ನೂ ಸೇರಿಸಿ ಪುಸ್ತಕ ರೂಪ ಮಾಡಿದ್ದು ಅತಿ ಸ್ತುತ್ಯ.

ಶ್ರೀ ದಾಮೋದರರವರು ಚಿಕ್ಕವರಿದ್ದರೂ ಹುರುಪಿನವರೂ, ಸಮಾಜ ಸೇವಕರೂ, ಸಾಹಿತಿಗಳೂ, ನಾಟಕಕಲಾಭಿರುಚಿಯುಳ್ಳವರೂ ಇರುವರೆಂಬ ಮಾತು ಈ ಪುಸ್ತಕದಿಂದ ಗೊತ್ತಾಗುತ್ತದೆ. ದೇವರ ಕೃಪೆಯಿಂದ ಶ್ರೀ ದಾಮೋದರರವರು ಇದಕ್ಕೂ ಹೆಚ್ಚಿನ ಸಾಹಿತಿಗಳಾಗಲೆಂದು ಹಾರೈಸುತ್ತೇನೆ.

ಕೆ. ಡಿ. ತಳೇಗಾಂವಕರ ಬಿ. ಎ. ಬಿ. ಟಿ.
೧೯೫೩ ಹೆಡ್‌ಮಾಸ್ತರ, ಸಿಟಿಹಾಯಸ್ಕೂಲ, ಹುಬ್ಬಳ್ಳಿ.



# ಅರಿಕೆ

ಕನ್ನಡ ಪ್ರಾಥಮಿಕ ಶಿಕ್ಷಕರ ಟ್ರೇನಿಂಗ ಕಾಲೇಜದಲ್ಲಿ ಶಿಕ್ಷಕ-ವಿದ್ಯಾರ್ಥಿಯ ವೃತ್ತಿ ಕೈಕೊಂಡಾಗ ಆಗಾಗ ಅವಕಾಶ ದೊರೆತುದರ ಪರಿಣಾಮವಾಗಿ ನನ್ನ ಗಮನವು ಜನಸಾಮಾನ್ಯರಲ್ಲಿದ್ದ 'ದುಶ್ಚಟ'ದ ಪ್ರಭಾವವನ್ನು ಬಿಂಬಿಸಿ ಅದರಿಂದಾಗತಕ್ಕ ದೋಷಗಳನ್ನು ಸಾಧ್ಯವಾದ ಮಟ್ಟಿಗೆ ಹೊಡೆದೋಡಿಸುವದರ ಸಲುವಾಗಿ ಹೊರಳಿತು.

ದುಶ್ಚಟದ ಪಾಶಕ್ಕೆ ಸಿಲುಕಿದ್ದ ಜನಸಾಮಾನ್ಯರ ಮನೋವ್ಯಾಪಾರಗಳ ಪರಿಚಯವೂ ಆಯಿತು. ಈ ಅಲ್ಪ ಅವಧಿಯ ಅನುಭವದ ಬೆಳಕಿನಲ್ಲಿ ಹೊರಬಿದ್ದಿದೆ, ಈ 'ಸಮಾಜದ ಗೋಳು' ಎಂಬ ಸಾಮಾಜಿಕ ಸಣ್ಣ ನಾಟಕವು. ಈ ಅಲ್ಪಅವಧಿಯ ಅನುಭವದ ಬೆಳಕೇ ಇದರಲ್ಲಿಯ ದುಶ್ಚಟದ ಪ್ರಭಾವವೆಂದು ಹೇಳಬಹುದಾಗಿದೆ.

ನನ್ನ ವ್ಯವಸಾಯ ಬಂಧುಗಳಾದ ಶಾಲಾಶಿಕ್ಷಕರು ಆತ್ಮಬಂಧುವಿನ ಅಲ್ಪಕಾಣಿಕೆಯೆಂದು ಅಭಿಮಾನಿತರಾಗಿ ಚಿಕ್ಕಮಕ್ಕಳಿಂದ ಇದನ್ನು ಮನಸಃ ಕಲಿಸಿ, ಜನಸಾಮಾನ್ಯರೆದುರಿಗೆ ಆಡಿಸಿ, ದುಶ್ಚಟದ ಪ್ರಭಾವವನ್ನು ಅವರಲ್ಲಿ ಬಿಂಬಿಸಿ, ಆನಂದಿತರಾದಾಗ ಮಾತ್ರ ನನ್ನ ಕಷ್ಟಕ್ಕೆ ಶ್ರೇಷ್ಠತೆ ಬರುವದೆಂದು ನಾನು ಬಗೆದಿದ್ದೇನೆ.

ಈ ನಾಟಕವನ್ನು ಮೇಲ್ಮಟ್ಟದ ಭಾಷೆಯಲ್ಲಿ ಬರೆಯದೇ ಕೇವಲ ಹಳ್ಳಿಯ ಭಾಷೆಯಲ್ಲಿ ರಚಿಸಿರುವೆನು. ಹಳ್ಳಿಯಲ್ಲಿನ ಜನರಿಗೆ ನಗೆಮುಖವಾಗಿ ತೋರಿ "ನಗೆಯಿಂದಲೇ ಇದರ ಬಗೆಯನ್ನು" ತೋರ್ಪಡಿಸುವದೇ ಈ ಭಾಷೆಯ ದ್ಯೋತಕವಾಗಿದೆ.

ಈ ನಾಟಕವು ಏಕಾಂಕಿಗಿಂತಲೂ ದೊಡ್ಡದು, ಮೂರಂಕಿಗಿಂತಲೂ ಸಣ್ಣದು ಇದ್ದುದರಿಂದ ಇದಕ್ಕೆ ಸಣ್ಣ ನಾಟಕವೆಂದು ಕರೆಯಲಾಗಿದೆ.

ದೇಶದ ದಾರಿದ್ರ್ಯತನ, ಸೋಮಾರಿತನ. ಇತ್ಯಾದಿ ದೇಶದ ಅಧೋಗತಿಯ ಲಕ್ಷಣಗಳು ಹೋಗಲೆಂದೂ ದೇಶವು ಆದರ್ಶವಾಗಲೆಂದೂ ಸರಕಾರದವರು ಪಾನನಿರೋಧ ಯೋಜನೆ, ಲಂಚನಿರೋಧ ಯೋಜನೆ ಮುಂತಾದ ಯೋಜನೆಗಳನ್ನು ರಚಿಸಿರುವರು. ಅವುಗಳ ಅಂಗವಾಗಿಯೇ ಈ ನಾಟಕವನ್ನು ಸಾಧ್ಯವಾದಷ್ಟು ಮಟ್ಟಿಗೆ ನನ್ನ ಅಲ್ಪಬುದ್ಧಿಯಿಂದ ರಚಿಸಿರುವೆನು ಅಲ್ಲದೇ ಇದೇ ನನ್ನ ಪ್ರಥಮ ಪುಸ್ತಕವಾದ್ದರಿಂದ "ಮೊಗ್ಗೆ"ಯೆಂದು ಕರೆದಿದ್ದೇನೆ. ಈ ಮೊಗ್ಗೆಯು ಅರಳಿದ ಹೂವಿನಂತೆ ಸುವಾಸನೆ ಕೊಡಲಿಕ್ಕಿಲ್ಲ "ಮೊಗ್ಗೆ ಅರಳಿ ಹೂವಾಗಲಾರದೆ!" ಎಂಬಂತೆ ಈ ಮೊಗ್ಗೆಯನ್ನು ಚಿವುಟದೆ ಅರಳಿದಾಗಾದರೂ ಸುವಾಸನೆ ಬೀರತಕ್ಕಂತಾದ್ದು! ಎಂದು ಬಗೆದು ಒಳ್ಳೇ ಪ್ರೀತಿಯಿಂದ ಈ ಮೊಗ್ಗೆಯನ್ನು ಕಾಣುವಿರೆಂದು ನೆರೆನಂಬಿದ್ದೇನೆ.

ಈ ಹೊತ್ತಿಗೆಯಲ್ಲಿ ಪ್ರತಿಯೊಂದು ಶಾಲೆಯೊಳಗೆ ನಿತ್ಯೋಪಯೋಗವಾಗತಕ್ಕ ಅಮೃತವಾಣಿಗಳನ್ನು ಸಹ ಸಂಗ್ರಹಿಸಿ ಪ್ರಕಟಿಸಿರುವೆನು. ಅವು ನನ್ನ ವ್ಯವಸಾಯ ಬಂಧು-ಭಗಿನಿಯರಿಗೆ ಸಹಾಯ ಮಾಡುತ್ತವೆಂದು ನನಗೆ ನಂಬಿಕೆ. ಅಲ್ಲದೆ ಅವುಗಳ ಉಪಯೋಗ ನಿತ್ಯಶಾಲೆಯಲ್ಲಿ ಮಾಡಿಕೊಳ್ಳುತ್ತೀರೆಂದು ನಾನು ನೆರೆನಂಬಿರುವೆನು.

ಮಕ್ಕಳಿಗೆ ಪಂಚಾಂಗಪರಿಚಯ ಮಾಡಿಕೊಡುವದರ ಕೋಷ್ಟಕ ಸಹ ಇದರಲ್ಲಿ ಉಂಟು.

ಇದರಲ್ಲಿ ೧೯೫೩ ರಿಂದ ೧೯೫೭ ರ ವರೆಗೆ (೫ ವರ್ಷದ) ಕ್ಯಾಲೆಂಡರು ಉಂಟು. ಮತ್ತು ಶಾಂತಿಪದ, ಪ್ರಾರ್ಥನಾಪದ, ಪರಮಾತ್ಮನನ್ನು ಕುರಿತು ಬೇಡಿಕೊಳ್ಳುವ ಮಂತ್ರಗಳೂ ಉಂಟು.

ಈ ನನ್ನ ಅಲ್ಪಕೃತಿಯನ್ನು ಓದಿ ಬಲು ಉತ್ಸುಕತೆಯಿಂದ ಕನ್ನಡದಲ್ಲಿ ಪ್ರತಿಭಾಸಂಪನ್ನರಾದ ನನ್ನ ಪೂಜ್ಯ ಗುರುಗಳೂ ಆದ ಪ್ರಿ. ಎಸ್. ಡಿ. ಇಂಚಲ ಅವರು ನಲ್ನುಡಿ ಬರಕೊಟ್ಟು ಈ ಪುಸ್ತಕಕ್ಕೆ ಜೀವಕಳೆ ತಂದುದಕ್ಕಾಗಿ ಅವರಿಗೆ ನಾನು ತುಂಬಾ ಋಣಿಯಾಗಿದ್ದೇನೆ. ಈ ಕೃತಿಯನ್ನು ಅತಿ ಆಗ್ರಹದಿಂದ ಪ್ರಕಾಶಿಸಲು ಮುಂದೆ ಬಂದು ಬೆಳಕಿಗೆ ತಂದ ಸರ್ವೋದಯ ಮಾಸ

ಪತ್ರಿಕೆಯ ಸಂಪಾದಕರಾದ ಶ್ರೀ ಕೊರ್ಲಹಳ್ಳಿ ಅವರಿಗೂ ತುಂಬಾ ಕೃತಜ್ಞನಾಗಿರುವೆನು. ಮತ್ತು ಒಳ್ಳೇ ಪ್ರೇಮಭಾವನೆಯಿಂದ ಓದಿ ತಮ್ಮ ಮನದಭಿಪ್ರಾಯಗಳನ್ನು ತಿಳಿಸಿ ಬರೆದುಕೊಟ್ಟ ಕನ್ನಡ ಹಾಗೂ ತೆಲುಗುಭಾಷಾ ಪಂಡಿತರೂ, ಮಹಾಸಾಹಿತಿಗಳೂ ಆದ ಶ್ರೀ ಪಿ. ವೆಂಕೋಬಾಚಾರ್ಯ, ಮತ್ತು ಶ್ರೀ ಕೆ. ಡಿ. ತಕೇಗಾಂವಕರ ಅವರಿಗೂ ನಾನು ತುಂಬಾ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಅಲ್ಲದೆ ಅಲ್ಪಾವಧಿಯಲ್ಲಿಯೇ ಅಂದವಾಗಿ, ಅಚ್ಚುಕಟ್ಟಾಗಿ, ಅಚ್ಚು ಹಾಕಿಸಿಕೊಟ್ಟ 'ಸುಧಾ' ಪ್ರೆಸ್ಸಿನ ಒಡೆಯರಾದ ಶ್ರೀ ಕೆ. ಜಿ. ತಾಪಸ ಬಿ. ಎ. ಇವರನ್ನೂ ಸ್ಮರಿಸದಿರಲಾರೆ.

ದೇವಿನಸವಪ್ಪುರ | ಡಿ. ಹನುಮಂತರಾಯರು



# ಪಾತ್ರ ಪರಿಚಯ

★




೧) ಬಾಬುರಾಯ..............................( ದೇಶಭಕ್ತ )

೨) ಶರಣಪ್ಪ..............................( ಕೆರೆಗುಂಡಕ )

೩) ರಾಜು, ರಾಣಿ, ಎಕ್ಕ, ಗುಲಾಮಾ, ಝೋಕರ, ಖರ್ಚಿ
(ಆಟಗಾರರರು)

೪) ಚಂದ್ರಾಮ..............................( ಎಕ್ಕಣ್ಣನ ಮಗ )

೫) ಗುಂಡೂ..........( ದೇಶಭಕ್ತನ ಸಹಾಯಕ ನಕಲಿ )

೬) ಪೋಲೀಸರು..............................( ಇಬ್ಬರು )

೭) ರಮೇಶ..............................( ಶರಣಪ್ಪನ ಮಗ )

## ಹೆಣ್ಣು ಪಾತ್ರ

೮) ಬಂಗಾರಿ..............................( ಗುಂಡೂನ ಹೆಂಡತಿ )

೯) ಸುಲೋಚನಾ..............................( ಎಕ್ಕಣ್ಣನ ಹೆಂಡತಿ )

೧೦) ಗಂಗವ್ವ..............................( ಶರಣಪ್ಪನ ಹೆಂಡತಿ )

# ಸಮಾಜದ ಗೋಳು

( ಸಾಮಾಜಿಕ ಸಣ್ಣ ನಾಟಕ )

## ನಾಂದಿ

ರಾಗ:–

ಬಾ ತಾಯೆ ಜಗಜ್ಜನನಿ ಭಾರತಾಂಬೆಯೆ ಬೇಗ ।
ಏರು ಸಿಂಹಾಸನವ ಜಯಘೋಷ ಮಧ್ಯದಲಿ ॥ಪ॥

ನಿನ್ನ ಕನಸನು ಇಂದು ನನಸು ಮಾಡಿಹೆವಮ್ಮ ।
ನಿನ್ನ ಘನತೆಯನಿಂದು ಜಗಕೆ ತೋರುವೆವಮ್ಮ ॥
ನಿನ್ನ ಹರಕೆಯು ವಜ್ರಕವಚವೊಂದಿರಲಮ್ಮ
ಕುನ್ನಿ ವೈರಿಗಳೆದೆಯ ನಡುಗಿಸುವೆವಮ್ಮ ॥೧॥

ರಾಜರಾಜೇಶ್ವರಿಯು ನೀನಾದೆ ಬಾ ತಾಯೆ ।
ಓಜೆಯಿಂ ನೀನಿಂದು ಸಿಂಹ ಪೀಠವನೇರಿ ॥
ತೇಜವನು ನಮಗೀವ ವೀರಸಂದೇಶವನು
ಸಾಜದಿಂ ನೀಡಮ್ಮ ಪ್ರಿಯ ರಾಷ್ಟ್ರಜನನಿ ॥೨॥

# ೧ ನೆಯ ದೃಶ್ಯ

( ಬಾಬುರಾಯನು ಭಾರತಮಾತೆಯ ಭಾವಚಿತ್ರಕ್ಕೆ ಕೈಮುಗಿಯುವನು. )

ಬಾಬುರಾಯ:– ಭಾರತವು ಸ್ವತಂತ್ರವೇನೋ ಆಯಿತು; ಆದರೆ ಸಮಾಜದ ಒಂದು ಕಟ್ಟುನಿಟ್ಟು ಸ್ಥಿರ ಉಳಿಯಲಿಲ್ಲ ಕುಡಿಯುವದು, ಆಡುವದು, ಸೇದುವದು, ಇತ್ಯಾದಿ ದುಶ್ಚಟಗಳಿಗೆ ಬಲಿಬಿದ್ದು ಬಳಲುತ್ತ ನಿರುದ್ಯೋಗಿಗಳಾಗಿದ್ದಾರೆ. ತನ್ನ ಕಾಲವೇಲೆ ತಾನು ನಿಂತ ಈ ಬಡ ಭಾರತೆಯನ್ನು ಮತ್ತೆ ಪರತಂತ್ರಕ್ಕೆ ಸೇರಿಸಲು ಈ ನುಹಾತ್ಮರಿಗೆ ಏನೂ ಅಡ್ಡಿ ಆತಂಕಗಳು ಬರಲಿಕ್ಕಿಲ್ಲವಷ್ಟೇ? ಅದೇನೆ ಇರಲಿ ನನ್ನ ಕೈಲಾದ ಮಟ್ಟಿಗೆ ದುಶ್ಚಟಕ್ಕೆ ಬಲಿಬಿದ್ದ ಜನರನ್ನು ಪಾರು ಮಾಡಲು ಯತ್ನಿಸುತ್ತೇನೆ. ದೇವೀ! ಭಾರತಮಾತೆ, ಜನ್ಮದಾತೆ, ಇದಕ್ಕೆ ನಿನ್ನ ಕರುಣೆ ಇರಲಿ. (ಮುಂದೆ ಬಂದು) ಈಗ ಸದ್ಯ ಗುಂಡೂರಾಯರ ಮನೆಗೆ ಇನ್ನೊಮ್ಮೆ ಹೋಗಿ ಹೇಳೋಣ. (ಹೋಗುವನು.)

( ತೆರೆ ಬೀಳುವದು. )



# ೨ ನೆಯ ದೃಶ್ಯ

( ಗುಂಡೂರಾಯರ ಮನೆ, ಬಂಗಾರಿಯು ಒಳಗೆ ಇರುತ್ತಾಳೆ. )

**ಗುಂಡೂ:–** (ಪ್ರವೇಶಿಸಿ) ಬಂಗಾರೀ! ಬಂಗಾರೀ!! ಏ ಬಂಗಾರೀ೦೦೦ ಎಲಾ ಇವಳ ಎಷ್ಟು ಒದರಿದರೂ ಇವಳಿಗೆ ದರಕಾರಾನ ಇಲ್ಲಲಪಾ. ಎಲೀ ಬಂಗಾರಿ. ಬಂಗಾರಿ ಬಂಗಾರೀಽ ಅಂದೆ.

**ಬಂಗಾರಿ:–** (ಬಂದು) ಯಾಕರೀ ಯಾಕ ಚೀರತೀರಿ ನರೀಯಾಂಗ.

**ಗುಂಡೂ:–** ಭಸ್ಪರಿ ಹುಡುಗಿ ಸಂಗೊತ್ತು ನೀಹೀಂಗ ಅಂತೀಅಂತ.

**ಬಂ:–** ಹೂಂ.........ಇಲ್ಲಿ! ಏನದ-ಽ.

**ಗುಂಡೂ:–** ಬಾರ ಹೀಗೆ.

**ಬಂ:–** ಹೂಂ.........ಹೇಳ್ರಿ.

**ಗುಂಡೂ:–** ಬಾಽರ ಹೀಗೆ. ಅಬ್ಬ, ಎಟ್ಟನಿಂಗ ನಾಚಿಕಿ.

**ಬಂ:–** ಅಲ್ರಿ ಸಿಲ್ರಿ ಇಲ್ಲೆ.

**ಗುಂಡೂ:–** ಯಾಕ ಏನು ಹೇಳು?

**ಬಂ:–** ನೀವು ಎಷ್ಟುವತ್ತರದಿಂದ ಒದರತೀರಿ.

**ಗುಂಡೂ:–** ಯಾಕ ಏನಾಕ್ಕತಿ?

**ಬಂ:–** ಏನಾಕ್ಕತೀಽಽ ಬಿಡುನೀ ಪುಸುಕ್‌ನ ಉಸಲಗಿಸಲ ಹೋದರ ಕಿಸ ಕ್‌ನ ಮಂಗ್ಯಾಬಸ್ಥಂಗ ಕಿಸಗೊಂಡ ಕುಂಡರಬೇಕಾದೀತ.

**ಗುಂಡೂ:–** ಇರ್ಲಿ ಬಿಡು ನಾಚಿಕೀನ ಇಲ್ಲ ನಿನಗಂತೂ.

**ಬಂ:–** ಏ ನಿನಗ ಮಾತ್ರ ಬಾಳ ನಾಚಿಕಿ ಮೊನ್ನೆ ರಾತ್ರಿ ಹಿಂಗ ವತ್ತರ ಮಾಡಿ ಮಂದಿನೆಲ್ಲ ಕೂಡಿಸಿದ್ದಿ ನಾಚಿಗ್ಗೇಡಿ.

**ಗುಂಡೂ:–** ಏ ಏ ಖಬರಗೇಡಿ ಖಬರ ತಗೊಂಡ ಮಾತಾಡ ವೈವ್ಯಾಲೆ.

ಬಂ:- ಐಯ್ಯ ಭಂಡಗಂಡಸ ಏಟಾರ ಎಚ್ಚರ ಆಯ್ತೇನು ವೈವೇಲಿ ಸುಡಕಮೂಳಾ. ಕುಡಿಯುದ ಬಿಡಃ ಬಿಡಃ ಅಂದರ ಆ ಶರೆಗ ಪಕ ಶರಣಪ್ಪನ ಗೆಣಿತನ ಮಾಡಿ ಕುಡಿಯಾದಕಲ್ತ ಅವನಂಗ ವಡಕಗಡಿಗಿ ಸಹ ಮಾರಾಕಹತ್ತಿದಿ ಖಬರ ಐತೇನ ಖಬರಗೇಡಿ. (ಅಳುವಳು) ಅವ್ವನವ್ವಃ ಸಾಕವ್ವ! ಹೆಣ್ಣಾಗಿ ಹುಟ್ಟಬಾರದು ಹುಟ್ಟಿದರೂ ಇಂಥ ಗಂಡನ ಕೈಯಾಗ ಉರಿಯಬಾರದು.

ಗುಂಡೂ:- ಏ ಏ ಸಾಕವಾಡಮಾರಳೆ. ನಿನ್ನ ಗಂಟೆ ಉಚ್ಚಬ್ಯಾಡ ಮುಂದಿ ನನ್ನ ಕೊಳ್ಳಾಗ ಚಿಪ್ಪಕಟ್ಯಾರ ಚಿಪ್ಪ. ಈಗ ನಾನು ಚಲೋ ಮನಸ್ಯಾ ಆಗೇನಿ ಚಲೋ ಮನಸ್ಯಾ.

ಬಂ:- ಆಃ! ಏನಿದು ನನಗೆ ಕೇಳಿಸುವದು ಕನಸೋ ಅಥವಾ ನನಸೊ (ಗಂಡನ ಕಡೆಗೆ) ಏನ್ರಿ ನೀವು ಏನಾಗೀರಿ ಇನ್ನೊವ್ಮೆ ಹೇಳ್ರಿ.

ಗುಂಡೂ:- ಈಗ ನಾನು ಕುಡುಕ ಅಲ್ಲ ಚಲೋ ಮನಸ್ಯಾ.

ಬಂ:- ನಿಜವಾಗಿಯೂ ನೀವು ಕುಡೇದುಬಿಟ್ಟಿರಾ? ಅವ್ವ ಅವ್ವ ನನ್ನ ಗಂಡನ.

ಗುಂಡೂ:- ದ್ಯಾವರಾಣ್ಯಾಗಿ ಬಿಟ್ಟಿ ಇಕಾ ನಮ್ಮಪ್ಪನ ಆಣಿ, ನಮ್ಮವ್ವನ ಆಣಿ, ನಮ್ಮ ದೇವರಆಣಿ, ನಿನ್ನ ಕೊರಳಾಣಿಗೂ ಕುಡೇದ ಬಿಟ್ಟೇನಿ ಈಗರ ಭರಾಸಾ ಆತ.

ಬಂ:- (ಸ್ವಗತ) ಆಹಾ ನಾನು ಗೆದ್ದೆ ದಿನಾಲೂ ಭಾರತೆವ್ವನ ಪೂಜಾ ಮಾಡುತಿದ್ದೆ ಇವತ್ತ ನಮ್ಮವ್ವ ನನಗ ಒಲದ್ಲು (ಕೈಹಿಡಿದು) ಬರ್ರಿ ಬಿಸಿ ಬಿಸಿ ಅಂಬಲಿ, ಸರಬರ ಕಟಿದ ಮಜಿಗಿ, ಉಳ್ಳಾಗಡ್ಡಿ ಹಾಕಿ ಉಣ್ಣಾಕ ನೀಡತೀನಿ ಬರ್ರಿ.

ಗುಂಡೂ:- ತಡಿತಡಿಯ ಹೋಗುನಂತ ಈಗ ನಾವು ಒಂದು ದಗದಾ ಮಾಡಬೇಕು, ದಗದಾ.

ಬಂ:- ಏನದು ಲಗುಲಗು ಹೇಳ್ಳ್ಯಾರ ಹೇಳ.

ಗುಂಡೂ:- ಆ ಮಣ್ಯಾತ್ಮ ಬಾಬುರಾಯಪ್ಪ ನಮ್ಮಂಥ ಕುಡುಕರಿಗೆ ಇಸ್ಪೇಟಿನ ಆಟಗಾರರಿಗೆ ಚಾ ಕುಡೂವವರಿಗೆ ಗ್ಯಾನಾ ಹೇಳಿ ಬಿಡಿಸಾಕ ತಿರಿಗಾಡಾಕ ಹತ್ಯಾರಂತೆ ಇನ್ನೂತನಕ ಹಿಂದ ನನಗೂ ಅವ ಹೇಳಿದ್ದಿಲ್ಲ ನಾನು ಅವಂಗ ಸಿಕ್ಕಾಂಗ ಬೈದು ಬೈದು ಕಳಿಸಿದ್ದೆ. ಆದರೂ ನನಗ ಮತ್ತೂ ಹೇಳತಿದ್ದ. ಈಗ ಆ ಮಾರಾಯುಗ ನಾನು ನೀನು ಕೂಡಿ ಅವನ ಕಾಲಿಗೆ ಬಿದ್ದ ಬರನ ಬಾ?

ಬಂ:- ಹೋಗನಂತ ಬರ್ರಿ. ಉಣ ಬರ್ರಿ. ಹಸಿದಿದ್ದೀತು ನಿಮ್ಮದು.

ಗುಂಡೂ:- ನಡಿಹಂಗರ ದೌಡ ದೌಡ ಉಣ್ಣಾಕ ಹಾಕು.

ಬಂ:- ಬರ್ರಿ ಬರ್ರಿ ಮುಂವ ನಡ್ರಿ. ಅವ್ವ ಅವ್ವ ನನಗಂಡ ಗುಂಡೂರಾಯನ.

( ಹೋಗುವರು. )



# ೩ ನೆಯ, ದೃಶ್ಯ ರಸ್ತಾ

ಗುಂಡೂ:- ಲಗು ಲಗು ಬಾರೇ ನನ ಬಂಗಾರೀ ಕಾಲನುಯ್ಯತಾವೇನ ಆ ಗಿಡದ ಬುಡಕ ಸ್ವಲ್ಪ ಕೂಡ್ರನ ಬಾ. ಬಾ ಬಾ ಏಳವ್ಯಾಕ.

ಬಂ:- ಅವ್ವಾ! ಉಶ್! ಒಂದು ಹೆಜ್ಜೆ ಸಹ ಮುಂದಕ ಇಡಾಕ ಆಗದಿಲ್ಲ! ಮ್ಯಾಲ ನೋಡಿಯಾ ರಣ ರಣ ಬಿಸಿಲು, ಬುಡಕ ನೋಡಿಯಾ ಉರಿ ಉರಿ ನೆಲ.

ಗುಂಡೂ:- (ಹೌಹಾರಿ) ಇಕಾ! ಅದೇ ನೋಡು! ಅವರೇ ಬರಾಂಗ ಕಾಣಸ್ಕೈತಿ, ಏಳ ಏಳ ದೌಡು. ಇಲ್ಲೇ ಬಂದ ಬಿಟ್ರು.

(ಬಾಬುರಾಯನ ಪ್ರವೇಶ)

ಶರಣರೀ ಎಪ್ಪ ಇಬ್ಬರೂ ಬೀಳುವರು.

ಬಾಬುರಾಯ:- ಯಾರು? ಗುಂಡುರಾಯನೇನು ಏಳಪ್ಪ ಏಳು ಪ್ರತಿ ನಮಸ್ಕಾರ ನಿನಗೆ! ಏಕೆ ಗುಂಡೂರಾಯಪ್ಪ ಇಂದು ಎಷ್ಟು ನಮ್ರತೆ ಯಿಂದ ವರ್ತಿಸುವೆಯಲ್ಲ.

ಗುಂಡೂ- ಅಪ್ಪಾರ (ನಗುತ್ತ) ಈಗ ನಾನು ಕುಡೂ ಚಟ ಬಿಟ್ಟೇನರಿ. ಪಿರೂತಿಯಿಂದ ಅಪ್ಪಾರನ ಕೂಡಿ ಹೇಳಾಕ ಅಂತ ಬಂದವರಿ.

ಬಂ:- ಹೌಂದರಿ ಎಪ್ಪ. ನನಗಂಡ ನಿಮ್ಮ ಹೇಳಿಕೆಯಂತೆ ಕುಡೂ ಚಟ ಬಿಟ್ಟು ಚಲೋ ಮನಸ್ಯಾ ಆಗ್ಯಾನರಿ. ಯಪ್ಪಾ ನೀವು ಒಳ್ಳೇರಪ್ಪ ನಮ್ಮಂತವರಿಗೆ ಗ್ಯಾನಾ ಹೇಳೇ ಚಲೋ ದಾರಿಗೆ ಹಚ್ಚತೀರಿ. ನಮ್ಮವ್ವ ನನ್ನ ತಾಯಿ ಭಾರತಮ್ಮ ಈ ಅಪ್ಪಾರಿಗೆ ಇದ ಬುದ್ಧಿನ ಕೊಡವ್ವ ನಿನ್ನ ಕಾಲಿಗೆ ಬೀಳತೀನಿ. (ಬೀಳುವಳು)

ಬಾ:- ಏಳಮ್ಮ ಏಳು. ನಾನೇನು ಅಂಥಾ ಮಹತ್ವದ ಕಾರ್ಯವನ್ನು ಮಾಡಿರುವೆನು. ನನಗಿಂತಲೂ ನಿನ್ನ ಪ್ರಯತ್ನವು ಹೆಚ್ಚಾಗಿದೆ ಗುಂಡೂರಾಯನ ಮೇಲೆ, ಪತಿಯು ದುರ್ಮಾರ್ಗಿ ಇದ್ದರೆ

ಸುಮಾರ್ಗಕ್ಕೆ ತರುವವಳು ಪತ್ನಿಯಲ್ಲವೇ? ( ಗುಂಡುರಾಯನಿಗೆ ) ಇರಲಿ ಗುಂಡೂರಾಯ ನಡೆಯುವವನು ಎಡುವಲೇಬೇಕು. ಆದರೆ ಮತ್ತೊಮ್ಮೆ ಎಡುವುದಂತೆ ಎಚ್ಚರದಿಂದಿರಬೇಕು. ಬಿಸಿ ಬಡಿಯದೆ ಬೆಣ್ಣೆ ಕರಗುವುದಿಲ್ಲ. ಅಂತೆಯೇ ನೀನು ಇಲ್ಲಿಯವರೆಗೆ ಅಜ್ಞಾನ ಅಂಧಕಾರದೊಳಗೆ ಸಿಲುಕಿದ್ದಿ ಈಗ ನೀನು ಸುಜ್ಞಾನ ಸುಜ್ಯೋತಿಯೊಳಗೆ ಬಂದಿರುವಿ ಈ ಬೆಳಕನ್ನು ಕಳೆದುಕೊಳ್ಳಬೇಡ? ತಿಳಿಯಿತೇ? ಇದು ನೋಡು ಇನ್ನೊಮ್ಮೆ ನಿನಗೆ ಕರಜೋಡಿಸಿ ಬೇಡುವೆ.

ಗುಂಡೂ:- ಯಪ್ಪಾ ದ್ಯಾವರು ನಿಮಗ ನಾವು ಕಾಲಿಗೆ ಬೀಳಾಕ ಹತ್ತಿದ ವ್ಯಾಲ ನೀವ ನಮಗ ಕೈಮುಗಿಯಬೇಕರ್ಯಾ. ಛೀ. ಬೇಡೆಪ್ಪ ( ಹೆಂಡತಿಯ ಕಡೆಗೆ ) ಏ ಬಾರ ಇನ್ನೊಮ್ಮೆ ಅಪ್ಪಾರ ಕಾಲಿಗೆ ಬೀಳೋನು. (ಬೀಳುವರು)

ಬಾಃ- ಸಾಕು. ಗುಂಡೂರಾಯಪ್ಪನವರೇ ಸಾಕು.

ಬಂಃ- ಅಪ್ಪಾರ? ನಿಮ್ಮಿಂದ ನಾವು ಚಲೋ ದಾರಿಗೆ ಹತ್ತೇವರಿ ನೀವಂ ನೋಡ್ರಿ ನಮಗ ತಂದಿ.

ಗುಂಡೂಃ- ಏ ಏ ತಂದಿಯಾಕ ದ್ಯಾವರೂ ಅನ್ನು?

ಬಂಃ- ದ್ಯಾವರು? ಇಕಾ ನೋಡ್ರಿ ನಾನು ನನ್ನ ಗಂಡನ ಪಾದಾ ಮುಟ್ಟಿ ಹೇಳತೀನಿ ನಿಮ್ಮ ಮಾತ ಮೀರಂಗಿಲ್ಲರಿ.

ಗುಂಡೂಃ- ಹೌಂದರಿಯಪ್ಪ ನಾನೂ ನನ್ನ ಹೆಂಡತಿ ತಾಳೀ ಮುಟ್ಟಿ ಹೇಳತೀನಿ ನಿಮ್ಮ ಉಗಳಂದಾಟಂಗಿಲ್ಲರಿ.

ಬಾ:- ( ಭಾ. ಮಾ. ಫೋ. ಕಡೆ ನೋಡಿ ) ಆಹಾ ದೇವಿ! ಭಾರತ ಮಾತೆ ನೀನು ಕಣ್ತೆರೆದರೆ ಯಾವದು ಅಸಾಧ್ಯ! (ಗುಂಡು ಬಂಗಾರಿ ಕ) ಸುಜ್ಯೋತಿಯ ಬೆಳಕಿನಲ್ಲಿ ಬಂದ ನವದಂಪತಿಗಳೆ ಧನ್ಯರು! ನೀವೇ ಧನ್ಯರು!! ನಾನು ನಿಮಗೆ ಕರಜೋಡಿಸಿ ಬೇಡಿಕೊಳ್ಳುತ್ತೇನೆ ಕೇಳು ವಿರಾ?

**ಗುಂಡೂ:–** ಛೀ ಛೀ ನೀವು ಕೈಮುಗಿಬೇಕರ‍್ಯಾ ಬ್ಯಾಡರಿ. (ಹೆಂಡತಿಯ ಕಡೆಗೆ) ಏ ನೀನರ ಹೇಳ.

**ಬಂ:–** ಬ್ಯಾಡ ಎಪ್ಪ ನೀವು ಕೈಮುಗೂದು ಬ್ಯಾಡ, ಹಂಗ ಹೇಳ್ರಿ ಕೇಳ ತೀವಿ. ಮಾಡದಾದರ ಮಾಡೇಕೊಡತೀವಿ.

**ಬಾ:–** ಮಾತಾ-ಪಿತೃ ಸಮಾನರಾದಂಥ ಬಂಗಾರಿ, ಗುಂಡೂರಾಯರೇ ಈಗ ನಾನು ಕೈಕೊಂಡ ಕೆಲಸಕ್ಕೆ ನೀವು ಸಹಾಯವಾಗಬೇಕಾಗಿದೆ. ಏನೆಂದರೆ ಅಮ್ಮಾ ಬಂಗಾರಿ? ಇಲ್ಲಿಯವರೆಗೆ ನಿನ್ನ ಪತಿದೇವರಿಗೆ ಏನು ಬುದ್ಧಿ ಹೇಳುತ್ತಿದ್ದೆನೋ! ಅದರಂತೆ ಹೇಳಲು ಇನ್ನೂ ಬಹಳ ಜನರು ನಮ್ಮ ಭಾರತದಲ್ಲಿ ಇರುವರು. ನಾವು ಸಾಧ್ಯವಾದಷ್ಟು ಜನರಿಗೆ ಬುದ್ಧಿಯನ್ನು ಹೇಳಿ ಈದುಶ್ಚಟಕ್ಕೆ ಬಲೆಬಿದ್ದ ಜನರನ್ನು ಬಿಡಿಸೋಣ. ಒಬ್ಬರಕ್ಕಿಂತಲೂ ಇಬ್ಬರು ಲೇಸು. ಎಂಬಂತೆ ನೀವಿಬ್ಬರೂ ನನ್ನ ಕಾರ್ಯಕ್ಕೆ ಸಹಾಯಕರಾಗಬೇಕೆಂದು ಕೇಳಿಕೊಳ್ಳುವೆ. ಇದಕ್ಕೆ ನಿಮ್ಮ ಒಪ್ಪಿಗೆಯೇ ?

**ಗುಂಡೂ:–** ಓಹೋ ಇಷ್ಟುಹೌದಲ್ರಿ! ನಿಮ್ಮಕೂಟ ತಿರಗತೀನಿ. ಜನರಿಗೆ ನಾನೂ ಹೇಳಿಷ್ಟು ಹೇಳತೀನಿ. ಇಕಾ ನೋಡ್ರಿ ನನ್ನ ಹೆಂಡತೀನು ನಮ್ಮ ಸಂಗಡ ಕರಕೊಳ್ಳೂನು. ನಾನು ಕುಡಿಯೋ ಜನರಿಗೆ, ಆಡೋಜನರಿಗೆ, ಸೇದೋಜನರಿಗೆ, ನನ್ನ ಉದಾಹರಣೆ ಐತಲ್ರಿ (ತನ್ನಷ್ಟಕ್ಕೆ) ಈ ಭೂಪಂದು ಹೇಳಿಕೊಂತ ಗ್ಯಾನ ಹೇಳತೀನಿ ಬಿಡ್ರಿ, ನೀವೂ ನನ್ನ ಕೂಟಾಗ ದನಿ ಕೊಡುವಂತರಿ.

**ಬಾ:–** ಓಹೋ! ಆಗತ್ಯವಾಗಿ ನಿನ್ನ ಉದಾಹರಣೆಯಿಂದಲೇ ಜನರಿಗೆ ಬೋಧ ಮಾಡೋಣ.

**ಗುಂಡೂ:–** ನನ್ನ ಹೆಂಡತಿ ಆದಾಳಲ್ರಿ ಬಂಗಾರಿ. ಆಕಿ ಬಾಳ ಹರೇಮಿರಿ. ಆಕಿಗೆ ಬ್ಯಾರೆ ಕೆಲಸ ಹಚ್ಚನರಿ. ನಾನೆಲ್ಲ ಉಪಾಯ ಹುಡಿಕೇನಿ.

**ಬಾ:–** ಏನದು ಗುಂಡೂರಾಯ ನಿನ್ನುಪಾಯ ಹೇಳು ನೋಡೋಣ.

**ಗುಂಡೂ:-** (ನಗುತ್ತ) ಕುಡಿಯ ಜನರ ಹೆಂಡರಿಗೆ ಗ್ಯಾನಾ ಹೇಳಾಕ ಹಚ್ಚನರೀ ಅಂದರನs ನಮ್ಮ ಕೆಲಸ ಪಾಸಾಗತದ. ಈಗಿನ ಕಾಲ ದಾಗ ಹೆಂಡರ ಮಾತು ಮೀರದಿಲ್ಲ ಜನರು. (ನಂದ ಉದಾಹರಣೆ ನೋಡ್ರಿ) ನಗುವನು.

**ಬಾ:-** (ತನ್ನಷ್ಟಕ್ಕೆ) ಪಾಪ! ತನ್ನ ಬುದ್ಧಿಗೆ ಎಷ್ಟು ತಿಳಿಯುವದೋ ಅಷ್ಟು ಮಾತನಾಡುವನು. ಇವನ ಮಾತನ್ನು ನಾವು ವಿಚಾರಿಸಿ ನೋಡಿದರೆ ದುಶ್ಚಟಕ್ಕೆ ಬಿದ್ದ ಜನರ ಹೆಂಡಂದಿರೆಲ್ಲ ತಮ್ಮ ತಮ್ಮ ಗಂಡಂದಿರಿಗೆ ಹೇಳುವದೇ ಇಲ್ಲವೇ? ಛೀ, ಹೇಳುತ್ತಿರಲಿಕ್ಕೆ ಬೇಕು. ಮನೆ ಹಾಳಾ ಗುವಾಗ ಹೆಂಡಂದಿರಿಗೆ ಅರಿವಾಗುವದಿಲ್ಲವೆ? ಹೇಳಿದರೂ ಸಹ ಅವರು ಕೇಳುತ್ತಿರಲಿಕ್ಕಿಲ್ಲ; ಇದು ಒಪ್ಪುವ ಮಾತು. ಇರಲಿ, ಇವನ ಮಾತನ್ನು ತೆಗೆದುಹಾಕುವದು ಬೇಡ. ಇವನಭಿಪ್ರಾಯದ ಪ್ರಕಾರ ಬಂಗಾರಿಯನ್ನು ಬಿಡೋಣ. ನನ್ನಿಚ್ಛೆಯ ಪ್ರಕಾರ ನಾವಿಬ್ಬರೂ ಮಾಡೋಣ. ಈ ರೀತಿಯಿಂದಲಾದರೂ ಆಗಲಿ; ಆ ರೀತಿಯಿಂದ ಲಾದರೂ ಆಗಲಿ ಒಟ್ಟಿನ ಮೇಲೆ ನಾವು ಕೈಕೊಂಡ ಕಾರ್ಯ ಸಫಲ ವಾದರೆ ಸಾಕು. ಕುರುಡನೇನು ಬೇಡುವ ಎರಡು ಕಣ್ಣು. ಅಂತೆಯೇ ನಾನೇನು ಬೇಡುವೆ ದುಶ್ಚಟವು ಹೋಗಲೆಂದು. (ಗುಂಡೂರಾಯನಿಗೆ) ಹಾಗೇ ಆಗಲಿ ಗುಂಡೂರಾಯ ಈಗ ನಾವು ಆ ಶರಣಪ್ಪನ ಮನೆಗೆ ಹೋಗಿ ಸಾಧ್ಯವಾದಷ್ಟು ಹೇಳೋಣ; ಬಾ ಹೋಗುವಾ.

**ಗುಂಡೂ:-** ನಡ್ರಿಯಪ್ಪಾ ಹೋಗೂನಡ್ರಿ. ನಾನೂ ಟೊಂಕಾಕಟ್ಟಿ ನಿಲ್ಲ ತೀನಿ. (ಹೆಂಡತಿಗೆ) ಏ, ನೀನೂ ಹೇಳು ಟೊಂಕಕ ಸೆರಗು ಕಟ್ಟೇನಿ **ಅಂತ.**

( ಹೋಗುವರು. )

( ತೆರೆ ಬೀಳುವದು. )



# ೪ ನೆಯ ದೃಶ್ಯ

( ರಾಜಾನ ಮನೆ, ಗುಲಾಮು ಬಂದು ಒದರುತ್ತಾನೆ. )

ಗುಲಾಮು:- ರಾಜಾ! ರಾಜಣ್ಣ!! ಏ ರಾಜಣ್ಣ!!!

ರಾಜಾ:- ಯಾರವರು.

ಗು:- ನಾನು ಮರಾಯಾ ಗುಲಾಮು. ಬಾ ಸ್ವಲ್ಪ ಹೊರಗೆ.

ರಾ:- (ಹೊರಗೆ ಬಂದು) ಓಹೋ, ನಮಸ್ತೆ ಗುಲಾಮುರಾಯಾ ಥ್ಯಾಂಕ್ಸ್ಯ.

ಗು:- ಅಲ್ಲಾ! ಎಕ್ಕಣ್ಣ, ೧ ಘಂಟೆಗೆ ಬರುತ್ತೇನೆಂದು ಹೇಳಿದ್ದ. ಆದರೆ ಈ ಒರೆಗೂ ಬರಲೇ ಇಲ್ಲವಲ್ಲ. ನೀನೂ ಸಹ ಸರಿಯಾಗಿ ಅದೇ ವೇಳೆಗೆ ಬರುತ್ತೇನೆಂದು ಹೇಳಿದ್ದಿ, ಏಕೆ ಬರಲಿಲ್ಲ. ದಾರಿ ನೋಡಿ ನೋಡಿ ಸಾಕಾಗಿ ಹೋತಪಾ.

ರಾ:- ನಿಜ. ಗುಲಾಮುರಾಯರೇ, ಎಕ್ಕಣ್ಣನ ಹತ್ತಿರ ಹಣವಿದ್ದಿಲ್ಲವಂತೆ, ನಮ್ಮೂರ ಸಾವುಕಾರರ ಹತ್ತಿರ ಕೊಲ ಬರೆದುಕೊಟ್ಟು ೫೦೦ ರೂಪಾಯಿಗಳನ್ನು ತರಲು ಹೋಗಿರುತ್ತಾನೆ. ಹಣ ತಂದೊಡನೆಯೇ ನನ್ನ ಹತ್ತಿರ ಬರುತ್ತೇನೆಂದು ಹೇಳಿದ್ದ. ಅವನು ಬಂದ ನಂತರ ಇಬ್ಬರೂ ಕೂಡಿಕೊಂಡು ನಿನ್ನ ಹತ್ತಿರ ಬರಬೇಕೆಂದು ಮಾಡಿದ್ದೆವು. ಇಷ್ಟೇ ಮಾತ್ರ ಹೆಚ್ಚಿಗೆ ಏನೂ ಇಲ್ಲ. ಹಿಡಿ ಹಿಡಿ ಸಿಗರೇಟ ಸೇದು ಈಗ ಬರಬಹುದು. (ಕೂಡ್ರುವರು. ಸಿಗರೇಟ ಸೇದಿದಂತೆ ನಟನೆ)

ಗು:- ಆ ದೊಡ್ಡ ಮನೆಯಲ್ಲಿ ಕೂಡ್ರಲು ನನಗೆ ಬಹಳ ಬೇಸರವಾಯಿತು. ನೋಡು ಅವರಾದರೂ ಬರಬಾರದೇ?

ರಾ:- ಯಾರಪಾ ಆವರು ಮತ್ಯಾರೋ! ಹೊಸ ಕುಳ ಇಳಿಸೀ ಅನಬಾರದ, ಯಾವೂರವರು.

ಗುಃ— ಹೊಸಬರಂತೂ ಯಾರೂ ಇಲ್ಲ. ನಮ್ಮವರೇ ರಾಣೆ, ಖರ್ಚೆ, ಝೋಕರ.

ರಾ:— ಅವರು ಸಹ ಬಂದಿಲ್ಲವೇ.

ಗು:— ಊಹೂಂ ಅವರೂ ಬಂದಿಲ್ಲ. ಅಲ್ಲೇ ರಾಜಣ್ಣಾ, ಯಲ್ಲಾ ಜನರನ್ನು ಕರಕೊಂಡು ಬಂದು ಆಟದ ಮನೀಗೆ ಜಮಾ ಮಾಡೊ ದಲಾಲೀನೂ ಬರಬಾರದ. ಅವನಿಗೆ ಕೊಡುವ ದಿನಗೂಲಿ ೪ ರೂಪಾಯಿ ವ್ಯರ್ಥ ನೋಡು.

ರಾಃ— ಇಲ್ಲ ಇಲ್ಲ ಮರೆತಿದ್ದೆ. ನಮ್ಮ ದಲಾಲಿಯು ಒಂದು ಬೇರೆ ಕೆಲಸದ ನಿಮಿತ್ಯ ಊರಿಗೆ ಹೋಗಿರುವನು. ಹೋದರೂ ಸಹ ಹೋಗುವಾಗ ಎಲ್ಲರಿಗೂ ಭೆಟ್ಟಿಯಾಗಿ ಹೇಳಿಹೋಗಿದ್ದಾನೆ. (ಆ ಮಾತು ಈ ಮಾತು ಮಾತನಾಡುವರು.)

(ಎಕ್ಕಣ್ಣನ ಪ್ರವೇಶ.)

ರಾ. ಗುಃ— ಓಹೋ ನಮಸ್ಕಾರ ಬರ್‍ರಿ.

ಎಕ್ಕಣ್ಣಃ— ನಮಸ್ಕಾರ ಮತ್ತೇಕೆ ತಡ, ನಡೆಯಿರಿ. (ಕಿಸೆಯಲ್ಲಿಯ ರೂಪಾಯಿಗಳ ನೋಟು ತೋರಿಸುವನು.)

ರಾಃ— ತಡವೇನಿಲ್ಲ ಎಕ್ಕಣ್ಣ! ಎಷ್ಟೊತ್ತು ಹೋಗಿದ್ದಿರಲ್ಲ?

ಎಃ— ರಾಜಣ್ಣ ನಮ್ಮೂರ ಸಾವುಕಾರನಿಗೂ ನನಗೂ ಸ್ವಲ್ಪ ವಾಗ್ವಾದ ನಡೆಯಿತು.

ರಾಃ— ಅಂತಾ ಮಹತ್ವದ್ದೇ?

ಎ:— ಏನಿಲ್ಲ, ರಾಜಣ್ಣ ಒಂದಕ್ಕೆ ಹತ್ತು ಪಟ್ಟು ಆಸ್ತಿಯನ್ನು ಬರಕೊಟ್ಟರೆ ಮಾತ್ರ ಹಣ ಕೊಡುವೆನೆಂದು ಹಟ ಹಿಡಿದಿದ್ದ. ಸಾಧ್ಯವಾದಷ್ಟು ನಾನು ಚರ್ಚೆ ಮಾಡಿದೆ; ಆದರೆ ಏನೂ ಪ್ರಯೋಜನೆಯಾಗಲಿಲ್ಲ. ಕೊನೆಗೆ ೫೦೦೦ ರೂ. ಬೆಲೆಬಾಳುವ ಆಸ್ತಿಯನ್ನು ಬರಕೊಟ್ಟು ೫೦೦

ರೂ. ತಂದೆನು. ಇದಕ್ಕೆ ಸ್ವಲ್ಪ ಹೊತ್ತಾಯಿತು ಇಷ್ಟೇ. ತಮಗೆ ತೊಂದರೆಯಾಗಿರಬಹುದಲ್ಲವೇ.

ಗುಃ- ನಮಗೇನು ತೊಂದರೆ ಇಲ್ಲ ಎಕ್ಕಣ್ಣ; ನಡೆಯಿರಿ ಹೋಗೋಣ ತೀವ್ರ ಅವರೂ ಸಹ ಅಲ್ಲಿಗೆ ಬಂದಿರಬಹುದು.

(ಹೋಗುವರು.)

........ರಸ್ತಾ........ (ಬಾಬುರಾಯ, ಗುಂಡೂ, ಬಂಗಾರಿ ಪ್ರವೇಶ.)

ಬಾಃ- ಏನು ಗುಂಡೂರಾಯರೇ ಎಷ್ಟು ಹುಡುಕಿದರೂ ಆ ಶರೆಗುಡುಕ ಶರಣಪ್ಪನ ಸುಳಿವೇ ಸಿಗಲೊಲ್ಲದಲ್ಲ. ೩-೪ ಬಾರಿ ಅವನ ಮನೆಗೆ ಹೋಗಿ ಬಂದದ್ದಾಯಿತು. ಈ ವರೆಗೂ ನಮ್ಮ ಕಣ್ಣಿಗೆ ಬೀಳ ಬಾರದೇ.

ಬಂಃ- ಅಪ್ಪಾರ ಎಲ್ಯಾರ ಕುಡುಕಂತ ಕುಳಿತಿದ್ದೀತಬಿಡ್ರಿ. ಕುಡುಕರ ಆಟನ ಈಟ. ಮನ್ಯಾನ ಹೆಂಡರ ಮಕ್ಕಳ ಖಬರ ಇರೋದಿಲ್ಲ ಕುಡುಕ ಮೂಳಗೂಳಿಗೆ.

ಗುಂಡೂಃ- ಅಪ್ಪಾರ ಬರ್ರಿ ಇಲ್ಲೆ ಆ ಕಲ್ಲಪ್ಪನ ಮನ್ಯಾಗ ಇಂತಾ (ಇಸ್ಪೇಟ ನಂತೆ ಕೈಮಾಡಿ) ಆಟ ನಡೀತೇತಿ ಅಂತೆ. ಆ ದೇವರುಗಳಿಗೆ ದರ್ಶನಾ ಕೊಟ್ಟು ಬರೋನ ಬನ್ರಿ ಒಂಜರಾ

ಬಾಃ- ನಡೆ ಹಾಗಾದರೆ ನೋಡವಾ ಆ ಪುಣ್ಯಾತ್ಮರ ಸ್ಥಿತಿಯನ್ನು, ಅವರ ಸ್ಥಿತಿ ಗಡಿದಾಟಿರುವದೋ! ಅಥವಾ ಹಿಡಿತದಲ್ಲಿಯೇ ಇರುವದೊ.

(ಹೋಗಹತ್ತುವರು)

ಬಂಃ- ನಿಲ್ರಿ ಅಪ್ಪಾರ. ಇನ್ನೊಂದು ಮಾತು ಐತಿ. ಆ ಶರಣಪ್ಪನ ಮನಿಗೆ ಹೋಗಿದ್ದಿಲ್ಲರ್‍ಯಾ ನಾನು. ಅವನ ಹೆಂಡತಿ ಗಿಂಡೆವ್ವಸಂಗ ಗಂಗವ್ವನನ್ನ ವೈಹುಳ್ಯಾಂಗ ಹಣದ ಆಕಿ ಹತ್ತರ ಇದ್ದ ಚಲೋ ಸೀರಿ ಕಸಗೊಂಡು ಕುಡ್ಯಾಕ ಹೋಗೇತಂತರೀ ಎಪ್ಪಾ. ಆ ಗಂಗವ್ವನ

ಗೋಳಾ ಏಟರ ಹೇಳಬೇಕರಿ. ಪಾಪ! ಹೆಣ್ಣಾಗಿ ಹುಟ್ಟಬಾರದು! ಹೆಣ್ಣಿನ ಬಾಳು ಬಲುಗೋಳು!

ಬಾ:- ಹೌದು ತಾಯಿ ಬಂಗಾರಿ! ದುಶ್ಚಟದ ದುರ್ನಡೆತೆಗೆ ಬಲಿಬಿದ್ದ ಗಂಡಂದಿರ ಹೆಂಡಂದಿರು, ಹೀಗೆ ಬಳಲಬೇಕಾಗುತ್ತದೆ. ನೀನೇ ಎಷ್ಟು ಬಳಲಿದಿ ನೋಡು? ಹಾಗೆಯೇ ದುಶ್ಚಟಕ್ಕೆ ಬಲಿಬಿದ್ದ ಜನರ ಪರಿಸ್ಥಿತಿ ಎಲ್ಲಿಯುವರೆಗೆ ನಮ್ಮ ಭಾರತದಲ್ಲಿ ದುಶ್ಚಟ, ದಾರಿದ್ರ್ಯ, ಹೇಡಿತನ ವನ್ನು ಅಳಿಯುವದಿಲ್ಲವೋ ಅಲ್ಲಿಯುವರೆಗೆ ನಮಗೆ ಸ್ವಾತಂತ್ರದ ನಿಜ ವಾದ ಸುಖಶಿನಿಸು ಸಿಗುವದಿಲ್ಲ. ಖಂಡಿತ ಖಂಡಿತ. ಇದಕ್ಕೆ ನಾವು ಬಲಿಸಲು ಅನುವುಮಾಡಿಕೊಟ್ಟರೆ ನಮ್ಮ ಕಾಲ ಮೇಲೆ ನಾವೇ ಕಲ್ಲು ಚಲ್ಲಿಕೊಂಡು ನೋವಾಗಿದೆ ಎಂದು ಬಳಲಬೇಕಾಗುತ್ತದೆ. ಇರಲಿ! ಬಂಗಾರೆಮ್ಮ ಈಗ ಇಸ್ಪೇಟಿನ ಆಟದ ಮನೆಗೆ ಹೋಗೋಣ ವೆಂದು ಗುಂಡೂರಾಯನು ಹೇಳುತ್ತಿರುವನು. ಅಲ್ಲಿಗೆ ಹೋಗಿ ಬರು ತ್ತೇವೆ. ನೀನು ಮಾತ್ರ ನಿನ್ನ ಮನೆಗೆ ಹೋಗು?

ಬಂ:- ಹಾಗಲ್ರಿ ಯಪ್ಪ. ಮನೀಗಿ ಹೋಗತೀನಿ ಆ ಸುಲೋಚನಮ್ಮ ಆದಾಳಲ್ರಿ ನಿಮ್ಮನ್ನ ಮನೀಗೆ ಬಂದಹೋಗಬೇಕಂತ ಹೇಳ್ಯಾಳ ನೋಡ್ರಿ. ಲಗೂನ ನೀವು ಅವರೂ ಕೂಡೇ ಬರ್ರಿ. ನಾನು ಅಲ್ಲೇ ಇರತೀನಿ. (ಗಂಡನ ಕಡೆಗೆ) ಲಗಟ ಬಾ ಏನ ಹಂಗ ಕುಂದರತೀನಿ ನಿನ ದಾರೀ ಕಾಯಿಕೋತ.

(ಒಂದು ಬಾಜು ಬಾ. ಗುಂ. ಒಂದು ಬಾಜು ಬಂಗಾರಿ ಹೋಗುವರು.)

ಚಿನ್ನಪ್ಪ:- (ಪ್ರವೇಶಿಸಿ) ಇವಳ್ಯಾರಪಾ! ಅಹಹ ಎಷ್ಟು ಬುದ್ಧಿವಂತಿಕಿ! ಹೆಂಗಸರು ಗಂಡಸರಿಗೆ ಬುದ್ಧೀಹೇಳಬೇಕ. ಛೀ, ಈಗಿನ ಕಾಲಾನ ಹಿಂಗಏನ. ಅಲ್ಲಾ. ಏ ಚಿಲಿಮಿ ಚಿನ್ನಪ್ಪ! ಇನ್ನೂತನಕ ಚಿಲಮಿ ಸೇದತೀಯಾ! ಇನ್ನ ಮ್ಯಾಲ ನೀನು ಚಿಲಮಿ ಸೇದಿದ್ದ ಕಂಡರ ನಿನ್ನ ಚಿಲಮಿ ಚಿಪ್ಪಾಟಿ ಮಾಡಿ ನಿನ್ನ ಛೀಮಾರಿ ಮಾಡಿಬಿಡತೀನಿ. ಜೋಕಿ ಯಿಂದ ಇರು. ಅಬ್ಬಾ! ಎಷ್ಟಪಾ ಇವಳದು ತಾನ ಹೆಂಗಸಾಗಿ ತನ್ನ

ಸೀರ್ಯಾಗ ಕೈಯಾಡಿಸಿಕ್ಯಾಬೇಕು. ಬೇರೆದವರಿಗೆ ಕೈಯಾಡಸಾಕ ಬಂದರ ಕೇಳ್ಯಾರೇ! ಬರ್ಲಿ ಇನ್ನೊವ್ಮೆ ನನಗ ಹೇಳಾಕ, ಅವಾಗ ತೋರಸತನಿ ಈಕೀಗೆ ಈ ಚಿಲವಿ ಚಿನ್ನಪ್ಪನ ಕೈಯು. ಅಲ್ಲಪಾ ನಮ್ಮ ರೊಕ್ಕದಿಂದ ನಾವು ಸೇದಿದರ ಇವರಗ್ಯಾಕಪಾ ಹೊಟ್ಟೆಕಿಚ್ಚು. ಇನ್ನೊಬ್ಬವ ಬರತಾನ ಬಾಬುರಾಯಪ್ಪನಂತ. ಅವನೂ ಹಂಗ ಹೇಳತಾನ ಇವಕೇನ ಗೊತ್ತ ಐತಿ ಈ ಚಿಲವಿ ಪರಸಾದ ಭಗವಂತನ ಕಾಣದಾರೆಪ ಇದು. ಹ್ಯಾಂಗ ಅಂದರ ಹೇಳತೀನಿ ಕೇಳ್ರಿಲ್ಲೆ. (ಚಿಲವಿ ತೋರಿಸುತ್ತ) ಈ ಚಿಲವಿ ಅನ್ನದ ಒಂದು ಕೈಲಾಸ. ಇದರಾಗಿನ ತಂಬಾಕ ಅನ್ನದ ಒಬ್ಬ ಭಗವಂತ. ಒವ್ಮೆ ಬಿಟ್ಟು ೩ ಸಾರೆ ಜಗ್ಗತಾ ಜಗ್ಗಿದರ ಅಂದರ ಭಗವಂತ ಹೊಟ್ಯಾಗ ಹೊಕ್ಕ ಒದ್ದಾಡಾಕಹತ್ತಾನ. ನಮ್ಮಪ್ಪ ದೊಡ್ಡವ.

## ಪದ

ಬಾ ರೋ:ನಮ್ಮಪ್ಪ ಗಾಂಜಿಸಿದ್ಧಪ್ಪ ।
ಇಂದು ನಿನ್ನಗ ಈ ಹೆಸರ್ಯಾರಿಟ್ಟರಪ್ಪ ॥ಬಾರೊ॥

ನಿದ್ದೆಗೆ ನಿನಸರಿ ಯ್ಯಾರೂ ಇಲ್ಲಪ್ಪ ।
ಎ ದ್ದೂ ಹೋಗದಂಗ ಮಾಡೋ ನಮ್ಮಪ್ಪ ॥ಬಾರೊ॥

ಕದ್ದು ಕಳವಿಲೆ ನಿನ್ನ ಸೇದುವರಪ್ಪ ।
ನಿದ್ದೆಮಾಡುತ ಅಲ್ಲೆ ಬೀಳುವರಪ್ಪ ॥ಬಾರೊ॥

( ತೆರೆ ಬೀಳುವದು. )



## ೫ ನೆಯ ದೃಶ್ಯ

ಸ್ಥಳ:- ಇಸ್ಪೇಟಕಾರರ ಮನೆ (ಬಾಬುರಾಯ ಗುಂಡೂರಾಯ ಮರಿಗೆ ನಿಂತಿರುವರು)

**ಖರ್ಚಿ:-** ಎಕ್ಕಣ್ಣಾ ಎಲಿ ಇಳುವು. ಎಷ್ಟೊತ್ತು ಅದು ಮಿಜಿ ಮಿಜಿ ಮಾಡಬಾರದು.

**ಎ:-** ಇಕಾ ತಗೊ ಇಳವೇನಿ; ಬೇಕ್ಕೇನ.

**ಗು:-** ಏನದು ಇಳಿವಿದ್ದು.

**ಎ:-** ಚೌಕ ರಾಜಾ.

**ಗು:-** ಬಿಡು ಮಹಾರಾಯ, ಪುಣ್ಯಾ ಬರಲಿ. ನನಗೂ ಅದ ಬೇಕಾಗಿತ್ತು. (ನಗುವನು.)

**ಝೋಕರಪ್ಪ:-** ಆ ಹಾ ಏನ ಹೊಡೆದೊ ಗುಲಾಮ; ೧೫ ರೂ. ಆಟ. ಕೂಂ ಹೂಂ ಟಿಪಾಸ.

**ರಾಣಿ:-** ಅದನ್ಯಾಕ ಇಳಿವಿದೋ; ಗುಲಾಮರಾಯಾ.

**ಎ:-** ಖರ್ಚಿಣ್ಣಾ ಇಳುವು ನಿನ್ನ ಪಾಳಿ.

**ಗು:-** ಶಾಹ್ ಬಾಶ್, ಬಿಡು ಮಾರಾಯಾ ಆಟ ಆತ.

**ಝೋ:-** ಅಬಾಬಾಬಾಬಾ ಎಷ್ಟ ದೊಡ ಆಯಿತಪ್ಪ ಆಟ. ಈ ಸಾರೆ ಅಂತೂ ಮಗ್ಗಲಾನ ಮುರಿದೆಲ್ಲ.

**ಎ:-** ಈ ಸಾರೆ ರಂಗ ಆಡದ!

**ಖ:-** ನೀನಂತೂ ೫೦೦ ರೂ. ಸಾಲಾ ತಂದೀದಿ; ಆಡೋನು ಅಂತೀದಿ. ನಾನು ೩೫೦ ರೂ. ತಂದಿದ್ದೆ; ಆದವು.

**ಝೋ:-** ನಾನು ೪೦೦ ರೂಪಾಯಿ ತಂದಿದ್ದೆನೋ ಮಾರಾಯಾ. ೫೦ ರೂ. ಉಳಿದಾವ.

**ರಾ:-** ಅದೆಲ್ಲ ಇರಲಿ; ಇದೇ ಕಡೇ ಆಟ; ರಂಗ ಆಡದ. (ಆಡುವರು.)

**ರಾಣಿ:-** ಎಷ್ಟಕ ಆದೀರಿ ಎಕ್ಕಣ್ಣನವರೇ?

ಎಃ– ಒಂದು ಆಟ.

ರಾಃ– ನಮ್ಮದೂ ಒಂದ ಆಟ.

ಗುಃ– ೨ ಆಟ.

ಝೋಃ– ನಮ್ಮದೂಃ ಒಂದ ಆಟ.

ಖಃ– ತಿರಗಿ ಮತ್ತೊಂದ ಆಟ.

ರಾಣಿಃ– ಹೂಂ, ನಾನೂ ಒದಸಿ.

ಎಃ– ಸಾಕ; ತೆಗೆ. ಏನಿರುವದು?

ಖಃ– ಸಮುದ್ರ.

ರಾಃ– ವಾಹ್ವ ವಾಹ್ವ ಖರ್ಚೆಣ್ಣ ದುಬ್ಬಾನ ಕೆತ್ತಿದಿ.

ಗುಃ– ಸಾಕು; ಆಟ. ಸಂಜೆಗೆ ಇಡೋಣ.

ಆಟ ಕ್ಲೋಜ. (ಎಲ್ಲರೂ ಸನ ಸ್ತೆ ಥ್ಯಾಂಕ್ಸ್ ಅನ್ನುವರು.)

ರಸ್ತೆಯಲ್ಲಿ ಬಾಬುರಾಯ ಗುಂಡೂರಾಯ.

ಬಾಃ– ಏನಿದು ಗುಂಡೂರಾಯಾ. ಏನು ವಿಚಿತ್ರ; ಇವರ ಸ್ಥಿತಿಗೆ ನಗಬೇಕೋ, ಅಥವಾ ಅಳಬೇಕೋ?

ಗುಂಡೂಃ– ಯಾಕರೀ ಯಪ್ಪಾ. ಇಷ್ಟಕ್ಕೆ ನಿಮಗೆ ಅಳಾಂಗ, ನಗಾಂಗ ಆತ ಏನ್ರಿ? ಆಯ್ಯೋಯಪ್ಪಾ. ಇದು ೧ ರೂಪಾಯಿದಾಗ ೪ ಆಣೆ ಇಲ್ಲರೀಯಪ್ಪಾ.

ಬಾಃ– ಹೌದು ಗುಂಡೂರಾಯಾಃ! ಇಷ್ಟೇಟಿನ ಎಲಿಗೆ ಜೀವ ಇರುವದೋ; ಎಲಿಯನ್ನು ಸಹ ಮಾತನಾಡಿಸುತ್ತಾರೆ. ಎಷ್ಟು ಹುಚ್ಚ ಇವರದು; ಗುಂಡೂರಾಯಾ. ಗಡೀನಂತೂ ಇವರು ಉಲ್ಲಂಘಿಸಿರುವರು. (ಕೈ ಮುಗಿದು) ಅಮ್ಮಾ! ಭಾರತ ಮಾತಾ, ಜಗಜ್ಜನನಿ! ಕಣ್ಮುಚ್ಚಿ ಕುಳಿತಿರುವೆಯಾ, ಇಷ್ಟು ದಾರಿ ತಪ್ಪಿದರೂ ನಿನಗೆ ಎಚ್ಚರವಾಗಲೊಲ್ಲದೇ; ಇನ್ನಾದರೂ ಕಣ್ದೆರೆಯಮ್ಮ.

**ಗುಂಡೂಃ**— ಅಪ್ಪಾರ ಎಲೀನ ಮಾತಾಡಸತಾರ ಅಂತಾ ತಿಳಿದೀರೇನ. ಛೀ, ಛೀ, ಕರೇಸುದ್ದಿ ಹೇಳಿದರ ನಂಗಂತೂ ನಗೂ ಬರತೇತಿ.

(ನಗುವನು.)

**ಬಾಃ**— ಹಾಗಿರುವದೇನು! ಹೇಳು ಹಾಗಾದರೆ?

**ಗುಂಡೂ**:— ಈಗೇನ ಅದಾರಲ್ರಿ ಆಡ ಪುಣ್ಯಾತ್ಮರು; ಆಡಬೇಕು ಅನ್ನ ಹದ್ದು ಏನೈತಿ ಆ ಹದ್ದು ಮೀರಿ ಆಡತಾರ. ಕಳುವು ಮಾಡುವವನಿಗೆ ಕಳ್ಳ, ಸುಳ್ಳು ಹೇಳುವವನಿಗೆ ಸುಳ್ಳ, ಅಂತಾ ಹೆಸರ ಇಡತಾರಲ್ರಿ; ಹಾಂಗ ಇವರ ದಗದಾ ನೋಡಿ ತಕ್ಕ ಹೆಸರು ಇಟ್ಟಾರ್ರಿ.

**ಬಾಃ**— ಇರಲಿ; ಗುಂಡೂರಾಯ! ಬಂಗಾರೆಮ್ಮನು ಹೇಳಿದಂತೆ ಆ ಶರಣಪ್ಪನ ಮನಿಗೆ ಹೋಗೋಣ ನಡೆ; ಆ ಸುಲೋಚಮ್ಮನವರ ಪರಿಸ್ಥಿತಿ ಏನಾಗಿದೆ ನೋಡುವಾ. ಬಂಗಾರೆಮ್ಮನೂ ಸಹ ದಾರೀ ಕಾಯುತ್ತಿರಬಹುದು.

**ಗುಂಡೂಃ**— ನಡ್ರಿಯಪ್ಪಾ! ನೋಡನ ನಡ್ರಿ!! ಆಗಿದ್ದಾಗಲಿ. ನಮ್ಮದರ ಗತಿ ಗಧಿಗೆವ್ವನ ಕೂಡ್ಲಿ; ಅವರದರ ಗತಿ ಗಂಗವ್ವನ ಕೂಡ್ಲಿ. ಟೊಂಕ ಕಟ್ಟಿ ನಿಂತವಿ ಅಂದಮ್ಯಾಲೆ ಯಾಕದು ಹೆದರದು. ವಳ್ಳಾಗ ತಲಿ ಇಟ್ಟ ಮ್ಯಾಲ ವಣಕಿ ಪೆಟ್ಟಿಗೆ ಹೆದರತಾರ್ಯಾ.

(ಹೋಗುವರು.)

**ಶರಣಪ್ಪಃ**— (ಹಿಂದಿನಿಂದ ಪ್ರವೇಶಿಸಿ) ಬಽಽಬ. ಬಽಽಽಽಬ.

**ಪದ**

ಲೋಕವೆ ಲೋ ದಿವ್ಯ । ಪಾಕವೇ ಲೋ ॥
ಲೋಕಕೆ ಈ ಸೆರೆ ಪಾಕವೇ ಲೋ ।
ಹೆಂಡರು ನಮಗೇಕೆ । ಮಕ್ಕಳು ನಮಗೇಕೆ ॥
ಎಲ್ಲವೂ ಇದರೊಳಗೆ ಈರುವದಲ್ಲ ॥ಲೋಕವೇ॥

ಆ ಹಾ ಹಾ ಈ ಸುಖದ ಮುಂದ ಯಾ ಸುಖನೂ ಅಲ್ಲ ನೋಡ. ಏ ನಮ್ಮವ್ವ, ನನ್ನ ತಾಯಿ ನೀಯನ್ನಕಾಯಿ. ಈ ಲೋಕದಾಗ ನಿನಗ ಸರಿ

ಯಾರೂ ಇಲ್ಲ. ಅವ್ವ, ಅಪ್ಪಾ, ಹೆಂಡತಿ, ಮಕ್ಕಳು, ಕಳ್ಳು, ಬಳ್ಳಿ ಎಲ್ಲಾಃ ಸುಳ್ಳು. ನೀನಃಃಃಕರೆ. ಬಂಗಾರ ಸಾಮಾನಾ, ಹೊಲಾ, ಮನಿ ಎಲ್ಲಾ ನಿನ್ನ ಮುಂದ ಮಣ್ಣುಮುಕ್ಕತಾವ. ನಿನ್ನೆ ಹೆಂಡತಿ ವೈವ್ಯಾಲಿನ ಸೀರಿ ಮಣ್ಣುಮುಕ್ಕಿ ಹೋತ. ( ಕುಡಿಯುವನು. ) ನಿನ್ನ ತಯಾರ ಮಾಡ ಮಾರಾಯಾ, ನಮ್ಮಪ್ಪ ಆವನ ನೋಡ ಗಂಡ.

(ಕುಡಿಯುತ್ತ ಕೂಡ್ರುವನು)

ಗಂಗಮ್ಮ:- (ಪ್ರವೇಶಿಸಿ) ಅಳುತ್ತ, ಅಯ್ಯೋ ನನ್ನ ದುರ್ದೈವವೇ. ಈ ಸ್ಥಿತಿಗೆ ನನ್ನನ್ನು ತಂದೆಯಾ. ಅಮ್ಮಾ ಭಾರತಮಾತಾ ಕಣ್ದೆರೆಯಮ್ಮ. ಕಣ್ದೆರೆದು ಬಳಲುವ ಬಡಪ್ರಾಣಿಯನ್ನು ದಿಟ್ಟಿಸಿ ನೋಡಮ್ಮ? ಕರುಣೆ ಬರಲೊಲ್ಲದೇ? ನನ್ನ ಪತಿಯನ್ನು ಒಳ್ಳೇ ದಾರಿಗೆ ಹಚ್ಚು. ಈಗ ಬಾಬುರಾಯಪ್ಪನವರಾದರೂ ಬರಬಾರದೆ? (ಗಂಡನನ್ನು ಮುಟ್ಟಿ) ಮಗು ನಿಮ್ಮನ್ನು ನೆನೆಸಿಕೊಂಡು ಅಳಹತ್ತಿದೆ; ಮನೆಗೆ ಹೋಗೋಣ ಬರ್ರಿ?

ಶಃ- ಏ ಯಾರ ನಿನ; ಯಾ ಮಗು ಅದು ನನ್ನ ನೆನೆಸದು. ಹೋಗ ಹೋಗ.

ಗಂ:- ನಾನರಿ ನಿಮ್ಮ ಹೆಂಡತಿ. (ಚರಣದಾಸಿ)

ಶಃ- ಎಲೇ ಗಂಗಿ ನೀಯಲ್ಲಿ ಹೆಂಡತಿ. ಹೋಗ ಹೋಗ ಯಾರನರ ನುಂಗಿ. (ಹೊಡೆಯಲು ಹೋಗುವನು ಜೋಲಿಯಿಂದ ಬೀಳುವನು) ನನಗ ಹೆಂಡತಿ ಇಲ್ಲ; ಮಕ್ಕಳೂ ಇಲ್ಲ; ಯಾರೂ ಇಲ್ಲ; ಇಕೆ ನಮ್ಮವ್ವ ನನ್ನ ತಾಯಿ. ಇಕಿ ಬಿಟ್ಟ ಯಾರೂ ಇಲ್ಲ.

ಗಂ:- (ಅಳುತ್ತ) ನಿಮ್ಮ ಕಾಲಿಗೆ ಬೀಳುವೆನು. ಮನೆಗೆ ಹೋಗನ ಬರ್ರಿ. ದಾರಿಯಲ್ಲಿ ಬೇಡ; ಯಾರಾದರೂ ಬಂದಾರು.

ಶಃ- ಯಾರಃ ಆವರು ಬರೋರು ಬಂದ ನನ್ನೇನ ಮಾಡತಾರ. ಇಕಾ ನಮ್ಮಪ್ಪಗ ೧೦ ರೂ. ಕೊಡಬೇಕಾಗೇತಿ; ತಾ ಇಲ್ಲೆ ೧೦ ರೂ.

ಗಂ:- ನನ್ನಲ್ಲೆ ಎಲ್ಲಿ ಬರಬೇಕರೀ. ಹೊಲಾ ಮಾರಿದಿರಿ, ಮನಿ ಒತ್ತಿ ಹಾಕಿದಿರಿ, ಇದ್ದಂತಾ ಡಾಗಿನ ಸಾಮಾನೂ ಮಾರಿದಿರಿ, ಮೈಮೇಲಿನ ಸೀರೆಯನ್ನೂ ಸಹ ಮಾರಿದಿರಿ ಇನ್ನೇನಿದೆ; ಕೊಡಲಿಕ್ಕೆ.

ಶ:- ಎಲೇ ಬೇಮಾನ ಹೆಣ್ಣ. ಏನೂ ಇಲ್ಲ ಅಂತ ನನ್ನ ಅಗ್ಗಮಾಡಾಕ ಹತ್ತೀದೇನ. ನಾನು ಬಾಳ ಮರ್‍ಯಾದಿವಂತಾ; ನಮ್ಮಪ್ಪ ನನ್ನ ಹತ್ತರ ಬಂದಾಗಿಂಡಾ ನನಗ ಬಾಳ ಕಿಮ್ಮತ್ತ ಬಂದೈತಿ. ಎಲ್ಲಾರೂ ನನಗ ಬರ್‍ರೀ ಶರಣಪ್ಪನವರೇ, ಏನಿತ್ತು ಕೆಲಸ; ಮೇಲೆ ಬರ್‍ರಿ; ಕೂಡ್ರಿ. ಹಣ ಬೇಕಾಗಿದೆಯೇ ಎಂದು ಕರೆದು ಕೈಹಿಡಿದು ಖುರ್ಚಿದ ಮೇಲೆ ಕೂಡ್ರಿಸತಾರ. ನೀನು ನನಗ ಏನಾರ ಹೇಳಿ ರೊಕ್ಕ ಇಲ್ಲ ಅಂತೀದಿ. ರೊಕ್ಕ ಇಲ್ಲದಿದ್ದರ ನಿನ್ನ ಕೊಳ್ಳನ ತಾಳಿ ಕೊಡ; ತಾಳಿ. ಬೇಮಾನ ಹೆಣ್ಣ.

(ಮೈಮೇಲೆ ಹೋಗುವನು.)

ಗಂ:- ಹಾಂ, ಹಾ, ತಡ್ರಿ ತಡ್ರಿ ಕೊಡತೀನಿ. (ಸಮಾಧಾನ ಮಾಡಿ) ಮನಿಗೆ ಹೋಗನ; ಮನೆಯಲ್ಲಿ ೧೦ ರೂಪಾಯಿ ಇಟ್ಟಿರುವೆ ಕೊಡ ತೀನಿ. (ತನ್ನಷ್ಟಕ್ಕೆ) ಹಾಯ ಭಾರತಮಾತಾ, ನೀನೇ ರಕ್ಷಿಸಮ್ಮ. ಇವರನ್ನು ಉಪಾಯದಿಂದ ಮನೆಗೆ ಕರೆದುಕೊಂಡು ಹೋಗಿ ಬಾಬು ರಾಯಪ್ಪನವರಿಗೆ ಒಪ್ಪಿಸಿದರೆ ನನ್ನ ಮಾನ ಉಳಿಯುತ್ತದೆ. ಅವರೂ ನಮ್ಮ ಮನೆಗೆ ಬರುತ್ತಿರಬಹುದು. ನಡೆಯಿರಿ ಮನೆಗೆ ಹೋಗೋಣ!

ಶ:- ಕೊಡತೀದೆ ಇಲ್ಲ! ಕೊಡಬೇಕ ನೋಡ!! ಕೊಡದಿದ್ದರ ನಿನ್ನ ಕೊಳ್ಳಂದು ಹರಕೊಂಡ ಬರತೀನಿ.

ಗಂ:- ಕೊಡತೀನಿ ಬರ್‍ರಿ. ಮನಿಗರ ಹೋಗೋಣ.

(ಹೋಗುವರು. ಹಿಂದಿನಿಂದ ಬಾಬೂರಾಯ ಗುಂಡೂರಾಯ ಬರುವರು.)

ಬಾ:- ಶರಣಪ್ಪ ನಿಲ್ಲಪ್ಪ.ऽऽऽ

ಶ:- ಯಾವಾನಾವಾ. ಹೋಗ ಹೋಗ, ನಾ ಹೊಂಟನಿ ರೂಪಾಯಿಕ.

ಗುಂಡೂ:– ನಾವಪಽಽಽ ಬಾಬುರಾಯಪ್ಪನವರು; ಗುಂಡೂರಾಯಪ್ಪನವರು.

ಗಂ:– (ಕಾಲಿಗೆ ಬಿದ್ದು) ಅಪ್ಪಾ ಅವರೇ ಉಳಿಸಿರಿ; ನನ್ನ ಮರ್ಯಾದೆಯನ್ನು ಉಳಿಸಿರಿ. (ಅಳುವಳು.)

ಶ:– ಎಲೆ, ಎಲೆ, ಹಜಾರಿ. ಯಾರ ಅವಾ ಅವನ ಕಾಲ ಯಾಕ ಬಿದ್ದಿ. ಅವನ ಇಟಕೊಂಡಿದೇನ.

(ಗಂಗವ್ವ ಕಿವಿಗೆ ಕೈ ಹಚ್ಚಿಕೊಳ್ಳುವಳು. ಬಾಬೂರಾಯನೂ ಕೈಹಚ್ಚಿಕೊಳ್ಳುವನು.)

ಬಾ:– ಅವಳು ನಿನ್ನ ಹೆಂಡತಿ ಅಲ್ಲವೇನಪ್ಪ. ಹಾಗೆಲ್ಲ ಅನ್ನಬಾರದು; ಬಾ ಹೀಗೆ.

ಶ:– (ಹೆಂಡತಿ ಕೈ ಹಿಡಿದು) ಬಾ ಬಾರಲೇ, ಬೇಮಾನ ಹೆಣ್ಣ. ನಿನ್ನ ಕುತಗಿ ಹಿಚಗತೀನಿ ಬಾ; (ಎಳೆಯುವನು. ಗುಂಡೂರಾಯನು ಬಿಡಿಸ ಹೋಗುವನು. ಶರಣಪ್ಪನು ಅವನ ಮೇಲೆ ಏರಿಹೋಗುವನು. ಗುಂಡೂರಾಯನ ಕಚ್ಚಿ ಕಳಿಯುತ್ತದೆ ಸರಿಪಡಿಸಿಕೊಳ್ಳುವನು.)

ಬಾ:– ಬಾರಪ ಶರಣಪ್ಪ; ಸ್ವಲ್ಪ ಇಲ್ಲಿತನಕ.

ಶ:– ತಡಿಯಪ ಬಾಬಪ್ಪ; ಮನಿಗೆ ಹೋಗಿ ಬರತನಕ.

ಗುಂಡೂ:– ಹಾಗೆ ಹಿಂದಕ ತಿರಗಿ ಅನಬಾರದಪಾ.

ಶ:– ಹೋಗ ಮುಂದ ನೀವು ಹಾಂಗ ಕೇಳಬಾರದಪಾ.

ಗುಂಡೂ:– ಬಂದ ಹೋಗೋಽ

ಶ:– ಬರದಿಲ್ಲ ಹೋಗಽಽಽ.

ಬಾ:– ಶರಣಪ್ಪ ನಿನಗ ಏನು ಬೇಕಾಗಿದೆ ಹೇಳು; ನಾನು ಕೊಡುವೆ. ಸುಮ್ಮನೆ ನಿನ್ನ ಹೆಂಡತಿಯನ್ನು ಏಕೆ ಕಾಡುವಿ.

ಶ:– ನನಗ ೧೦ ರೂ. ಬೇಕ.

ಗುಂಡೂ:– ನಾಽಽಽ ಕೊಡತೀನಿ ಬಾರ ಮಾರಾಯಾ.

ಶಃ– ಕೊಡತೀದಾ ಹಂಗಾರ; ಕೊಡು ಹಂಗಾರಾ. (ಹೆಂಡತಿಗೆ) ಏನಽಽ ಅವರು ೧೦ ರೂ. ಕೊಡತಾರಂತ ಬಾರಇಲ್ಲೆಽಽ ಏ ಭೂಪಾ ಕೊಡು ರೂಪಾಯಿ. ದೌಡತತಾ, ಹೊತ್ತಾಗತೈತಿ; ನನ್ನ ಹೆಂಡತೀನು ನಿನ್ನ ಹತ್ತಿರ ಬಿಟ್ಟಹೋಗತೇನಿ. ಬೇಕಾದ್ದ ಮಾಡ; ದೌಡ ರೂಪಾಯಿ ತತಾ.

ಬಾ:– ನಿಲ್ಲು ಶರಣಪ್ಪ. ಸಮಾಧಾನ ಮಾಡು; ಕೊಡುತ್ತೇವೆ. ಇಷ್ಟೇಕೆ ಅವಸರ ಮಾಡುವಿ; ನಾನೊಂದು ಮಾತು ಕೇಳುವೆ ಅದಕ್ಕೆ ಉತ್ತರ ಕೊಡುವೆಯಾ?

ಶಃ– ಹಂಡತೀನ ನಿನ್ನ ಕೈಯ್ಯಾಗ ಕೊಟ್ಟನಲ್ಲ. ಮತ್ತೇನದ ಕೇಳೂದು.

ಗುಂಡೂಃ– ಹಾಗೆಲ್ಲ ಅನ್ನಬಾರದು ಶರಣಪ್ಪ.

ಶರಣಪಾ ನಿನಗ ಮಾರಾಯಾ.

ಬಾಃ– ಶರಣಪ್ಪ ಹಾವು ಕಡಿದರೆ ಮನುಷ್ಯನು ಏನಾಗುವನು?

ಶಃ– ಯಿಸಾಯೇರಿ ಸಾಯತಾನಾ.

ಬಾಃ– ಹಾಗಾದರೆ ಹೊಗೆಯಿಂದ ಬಿಳಿಗೋಡೆ ಏನಾಗುವದು?

ಶಃ– ಕರೋಗ ಆಗತತಿ.

ಗುಂಡೂಃ– ನಿಲ್ಲ ಎಪ್ಪ ಇಲ್ಲೆ!! ನಾನೊಂದು ಕೇಳತೀನಿ?

ಅಲ್ಲ ಶರಣಪ್ಪ ಗಿಡಕ್ಕೆ ಗೆದ್ದಲಿ ಹತ್ತಿದರೆ ಆ ಗಿಡ ಏನಾಗುವದು?

ಶಃ– ಕೊಳತ ಪುಡಿಪುಡಿಯಾಗಿ ಉರಳಿ ಬೀಳತತಿ.

ಬಾಃ– ಇನ್ನೊಮ್ಮೆ ಆ ಗಿಡ ಹುಟ್ಟುತ್ತದೆ ಏನು?

ಶಃ– ಹುಟ್ಟದಿಲ್ಲ! ಸತ್ತಹೋಗುತ್ತದೆ.

ಬಾ:– ಹಾಗಾದರೆ ಮನುಷ್ಯನ ಹೊಟ್ಟೆಯು ಒಳಗೆ ಹುಳ ಹೊಕ್ಕರೆ ಆ ಮನುಷ್ಯನು ಏನು ಆಗುತ್ತಾನೆ?

ಶಃ– ಆ ಮನುಷ್ಯನೂ ಸಾಯುತಾನ. ಹೌದಪ ಬಾಬುರಾಯಪ್ಪ ಆ ಹುಳ ಕಂಡು ಕಂಡು ಯಾಕ ತಿನಬೇಕಪಾ! ಬುದ್ಧಿಗೇಡಿ ತಿನ್ನವ.

ಬಾ:– ' ಹಾಗಲ್ಲ ಶರಣಪ್ಪ ಮನುಷ್ಯನು ಕಂಡು ಕಂಡೂ ಹುಳವನ್ನು ತಿನ್ನುವದಿಲ್ಲ. ಆ ಹುಳಗಳು ನೀರಿನ ರೂಪವಾಗಲಿ, ಶೇರೆದ ರೂಪವಾಗಲಿ, ಚಹದ ರೂಪವಾಗಲಿ ಹೊಟ್ಟೆಯಲ್ಲಿ ಹೋಗುತ್ತವೆ. ಆ ಮೇಲೆ ಅವನನ್ನು ಗೆದ್ದಲಿಯಂತೆ ಕೊರೆದು, ಕೊರೆದು ಹುಚ್ಚನನ್ನಾಗಿ ಮಾಡಿ ಸಾಯಿಸುತ್ತವೆ ತಿಳಿಯಿತೇ. ಬೇಕಾದರೆ ನಿನಗೊಂದು ಉದಾಹರಣೆಯನ್ನು ತೋರಿಸುತ್ತೇನೆ ನಿಲ್ಲು. (ಶೆರೆಯಲ್ಲಿ ಇರತಕ್ಕ ಹುಳವನ್ನು ಶೋಧಿಸಿ ತೋರಿಸುವನು. ಮತ್ತು ಆ ಹುಳಗಳಿಂದ ಕ್ಷೀಣವಾದ ಒಬ್ಬ ಮನುಷ್ಯನ ಚಿತ್ರ ತೋರಿಸುವನು. ಅದರಿಂದ ಅವನಿಗೆ ಪೂರ್ಣ ನಂಬಿಗೆಯಾಗಿ ಆವತ್ತಿನಿಂದ ಕುಡಿಯುವದಿಲ್ಲವೆಂದು ಪ್ರತಿಜ್ಞೆ ಮಾಡುವನು.)

ಶ:– (ಕಾಲಿಗೆ ಬಿದ್ದು) ಮನುಷ್ಯನನ್ನು ಸುಡುತ್ತಿರುವ ಈ ಉರಿಮಾರಿ ದುರಿಗೆಯ ಬಲಿಗೆಬಿದ್ದು ತಿಳಿಯದೇ ವ್ಯರ್ಥ ಕೆಟ್ಟೆನಲ್ಲ ಆಹಾ ನನ್ನಂತೆ ಜನರೂ ಸಹ ತಿಳಿಯದೇ ಈ ಮಾರಿಯ ಬಲಿಗೆ ಬಿದ್ದಿರಬಹುದು. ಬಂಧುಗಳೇ ನೋಡಿರಿ, ಕಣ್ದೆರೆಯಿರಿ, ಈ ನನ್ನ ಸ್ಥಿತಿಯನ್ನು ನೋಡಿರಿ. ಹೆಂಡತಿಯ ಕೊಳ್ಳೊಳಗಿನ ತಾಳಿಯನ್ನು ಸಹ ಹರಿಯಲು ಹೋಗಿದ್ದೆ. ಈ ಮಾರಿಯು ಯಾವುದನ್ನೂ ಮಾಡಿಸಲಿಕ್ಕೆ ಹೇಸತಕ್ಕವಳಲ್ಲ. ಇದರಿಂದ ರೊಕ್ಕ ಹಾನಿ, ಮಾನಹಾನಿ, ಇವೆಲ್ಲವನ್ನೂ ತಿಳಿಯದೇ ಕುಡಿಯುತ್ತಿರುವ ಬಂಧುಗಳೇ ಬಿಡಿರಿ, ಬಿಡಿರಿ, ನಿಜವಾಗಿಯೂ ಬಿಡಿರಿ. ನಾನಂತೂ ಬಾಬೂರಾಯಪ್ಪನವರ ಕೃಪೆಯಿಂದ ಬಿಟ್ಟು ಉದ್ಧಾರವಾದೆ. ನೀವು ಸಹ ಇಷ್ಟಕ್ಕೆ ತಿಳಿದು ಬಿಡಿರಿ; ನಿಮ್ಮಾಣೆಯಾಗಿಯೂ ಬಿಡಿರಿ. (ಹೆಂಡತಿಗೆ) ಏ ಗಂಗೂ ಬಾ ತಂದೆಯ ಸಮಾನರಾದ ಬಾಬುರಾಯಪ್ಪನವರಿಗೆ ಇನ್ನೊಮ್ಮೆ ಕಾಲಿಗೆ ಬಿದ್ದು ಮನೆಗೆ ಹೋಗೋಣ; ಮಗು ಅಳುತ್ತಿರಬಹುದು. (ಇಬ್ಬರೂ ಕಾಲಿಗೆ ಬೀಳುವರು. ಬಂಗಾರಿಯು ಮಗುವನ್ನು ತರುವಳು.)

ಬಂ:– ಹೋಗು ಮಗು; ನಿನ್ನ ತಂದೆ ತಾಯಿಗಳ ಹತ್ತಿರ.

ಮಗು:– ಅಪ್ಪಾ, ಅವ್ವಾ (ನಗುವದು.)

ಶ:– ಬಾ ಮಗನೇ, ಅಪ್ಪಾ ಅವರ ಕಾಲಿಗೆ ನಮಸ್ಕಾರ ಮಾಡು. ಇವನೇ ನೋಡಿರಿ ನನ್ನ ಮುದ್ದು ಮಗು.

ಬಾ:– ಬಹಳ ಮುದ್ದಾಗಿದೆ ಶರಣಪ್ಪ. ಮುತ್ತಿನಂತ ಮಗನನ್ನು ಇಟ್ಟು ಕೊಂಡು ಸುರಳಿತವಾಗಿ ಸಂಸಾರವನ್ನು ಸಾಗಿಸುತ್ತ ಹೋಗು. ಯಾವ ದುಶ್ಚಟಕ್ಕೆ ಮತ್ತೆ ಬೀಳಬೇಡ; ತಿಳಿಯಿತೆ.

ಗುಂಡೂ:– ಶರಣಪ್ಪ ಶರೆಕುಡಿಯುವ ಚಟವೊಂದೇ ಬಿಟ್ಟರಾಗಲಿಲ್ಲ. ಅದರಂತೆ ಚಹ, ಇಸ್ಪೇಟ ಆಟ, ಗಾಂಜೀ ಸೇದುವದು ಇವೆಲ್ಲವನ್ನೂ ಬಿಡಬೇಕು.

ಶ:– ಏನು ಗುಂಡೂರಾಯಪ್ಪ, ಇನ್ನು ಮೇಲೆ ತಿಳಿದೂ, ತಿಳಿದೂ ಈ ಚಟ ಬಿಟ್ಟು ಆ ಚಟಕ್ಕೆ ಗುರಿಯಾಗಲೇ! ಛೀ, ಮಾರಾಯಾ; ಯಾವ ಚಟಕ್ಕೂ ಬೀಳುವದಿಲ್ಲ- ಈ ಚಟಕ್ಕೆ ಆಳಿಯ ಅಂದರ, ಆ ಚಟಕ್ಕೆ ಮಗಳ ಗಂಡ ಅನಬೇಕಾಗತೈತಿ.

ಗುಂಡೂ:– ಶರಣಪ್ಪ ನಿನಗ ಬಾಳಸಾರೆ ಶರಣಪಾ; ಹೋಗು, ಗಂಗ ವ್ವನ್ನ, ಮುದ್ದುಮಗನ್ನ ಕರಕೊಂಡು. ಬಂಗಾರದಾಂಗ ಹರಿಚಂದ್ರ, ತಾರಾಮತಿ ಇದ್ದಾಂಗ ಇರ್ರಿ.

ಗಂ:– (ಕೈಮುಗಿದು) ಅಪ್ಪಾರ ಆಗಾಗ ಮನಿಗೆ ಬರತಾ ಇರಬೇಕರಿ. ನಿಮ್ಮ ಪಾದಧೂಳಿ ಬಿದ್ದರ ನಮಗ ಪುಣ್ಯ ಬರತೈತಿ.

ಶ:– ಹೌದರೀಯಪ್ಪ; ಆಗಾಗ ಬರತಾ ಇರ್ರಿ. ಈಗssಬರ್ರಿ ಹೋಗೋಣ.

ಬಾ:– ಈಗ ಸದ್ಯ ಬೇರೆ ಕೆಲಸವದೆ; ಹೋಗಬೇಕಾಗಿದೆ. ಹಿಂದಿನಿಂದ ನಿಮ್ಮ ಮನೆಗೆ ಬರುವೆನು. ನೀವೆ ಹೋಗಿರಿ; ಚನ್ನಾಗಿ ಇರ್ರಿ.

ಗಂ:– ಅಪ್ಪಾರ, ಮನ್ಯಾಗ ಶಾರದವ್ವನರ ಇದ್ದರೇನ್ರಿ.

ಬಾ:– ಇದ್ದರು ಏಕೆ?

**ಗಂ:**– ಅವರ ಹತ್ರ ಸ್ವಲ್ಪ ಕೆಲಸ ಇತ್ತರಿ; ಮೊನ್ನೆ ನನಗ ನೂಲದ ಕಲಸ ತೀನಿ ಅಂತಾ ಹೇಳಿದ್ದರ್ರಿ.

**ಬಾ:**– ಬಹಳ ಒಳ್ಳೇದು; ಯಾವಾಗಲೂ ಮನೆಯಲ್ಲಿಯೇ ಇರುವಳು. ನೀನು ಬೇಕಾದಾಗ ಹೋಗಿ ಕಲಿಯಬಹುದು. ಈಗ ಸಾಧಾರಣ ೧೦-೧೨ ಜನ ಹೆಣ್ಣುಮಕ್ಕಳು ಕಲಿಯುತ್ತಿರುವರು.

**ಗಂ:**– ಆಗಲ್ರಿ ಎಪ್ಪ; ಹೋಗತೇವಿ.

**ಬಾ:**– ಒಳ್ಳೇದು, ಹೋಗಿರಿ; ಸುಖವಾಗಿ ಇರ್ರಿ.

**ಶ:**– ಗುಂಡೂರಾಯಪ್ಪ! ಮರಿಬ್ಯಾಡಪ್ಪ, ನಮನ್ನ.

**ಗುಂಡೂ:**– ಛೇ, ಛೇ, ನಿಮ್ಮನ್ಯಾಕ ಮರಿಲೆಪಾ! ನಿಮ್ಮಂಥವರನ ಮರಿತಾರೇನ.

**ಗಂ:**– ಅಣ್ಣಾರ! ಬಂಗಾರೆಮ್ಮನ್ನ ಮನಿಗೆ ಬಂದ ಹೋಗುಅಂತ ಹೇಳ್ರಿ?

**ಗುಂಡೂ:**– ಹಾಗೇಆಗಲಿ ಅಮ್ಮ; ಹೇಳುತ್ತೇನೆ.

**ಮಗು:**– ಬಾ, ಅವ್ವ ಹಸಿವೆಯಾಗಿದೆ; ಮನೆಗೆ ಹೋಗುವಾ?

**ಗಂ:**– ನಡಿಯಪ್ಪ; ಹೋಗುವಾ.

**ಶ. ಗಂ:**– ಬರತೇವ್ರಿ ಅಪ್ಪಾರ; ನಮಸ್ಕಾರ.

(ಹೋಗುವರು.)

( ತೆರೆ ಬೀಳುವದು. )



# ೬ ನೆಯ ದೃಶ್ಯ

—ರಸ್ತಾ—

**ಸುಲೋಚನಾ:–** (ಮಗನನ್ನು ಕರೆದುಕೊಂಡು) ಉಶ್! ಹಾಯ್!! ದುರ್ದೈವವೇ. ಈ ರೀತಿ ನನ್ನನ್ನು ಬಳಲಿಸುವಿಯಾ! ಹೇ, ವಿಧಿ ವಾಯೇ!, ಬಳಲಿಸು, ಬಳಲಿಸು ಈ ಪ್ರಾಣವಿರುವವರೆಗೆ ಬಳಲಿಸವಿ! ಆ ಮೇಲೆ. ಆ ಮೇಲೆ ಏನು ನಡೆಯುವದು; ನಿನ್ನ ಆಟ.

(ದುಃಖ)

**ಚಂದ್ರಾಪ್ರಮ:–** ಅವ್ವ, ಏಕೆ ಅಳುವಿ. ನಾನೂ ಅಳುವೆನು ನೋಡು. ರೊಟ್ಟಿ ಕೊಡು ಅವ್ವಾ ಎಂದರೆ ಅಳುವೆಯಲ್ಲಾ.

**ಸುಲೋ:–** ಅಪ್ಪಾ ಮಗು; ನೀನಿನ್ನೂ ಸಣ್ಣವ. ಊಟಕ್ಕೆ ಬೇಡುವವನಷ್ಟೇ. ಆದರೆ ನನ್ನ ದುಃಖ, ನನ್ನ ದುಃಖ, ಆದರೆ ನನ್ನ ದುಃಖ. ಯಾರೆದುರಿಗೆ ಹೇಳಲಿ ಮಗು. (ದುಂಖಿಸುವಳು.)

**ಚಂ:–** (ಪೌರುಷದಿಂದ) ನನ್ನೆದುರಿಗೆ ಹೇಳು; ನಾನು ಕೇಳುವೆ. ತಾಯಿಯ ದುಃಖವನ್ನು ಮಗನು ಕೇಳಬಾರದೆ.

**ಸುಲೋ:–** ಏನು ಹೇಳಲಿ ಚಂದ್ರು; ನಿನ್ನ ಹಡೆದವರು ಕೊಡುವ ಕಷ್ಟವನ್ನು.

**ಚಂ:–** ಅವ್ವಾ? ನೀನು ದಿನಾಲು ಅಪ್ಪನ ಸುದ್ದಿಯನ್ನು ನೆನೆಸಿಕೊಂಡು ಅಳುವಿಯಲ್ಲ. ಇಂಥ ಕೆಟ್ಟ ಅಪ್ಪನು ಇರುವದಕ್ಕಿಂತ ಸಾಯುವದೇ ನೆಟ್ಟಗೆ; ಅವ್ವಾ ಅಳಬೇಡ. ಅಪ್ಪನನ್ನು ಹುಡುಕಿ ಕರೆದುಕೊಂಡು ಬರುತ್ತೇನೆ. ಅವನು ಬರದಿದ್ದರೆ ಬಾಯಿಗೆ ಬಂದಹಾಗೆ ಬೈದೂ ಅವನ ಜಂಜಿ ಹಡಿದು ಎಳೆದುಕೊಂಡು ಬರುತ್ತೇನೆ. ಅಳಬೇಡ ಅವ್ವಾ ಅಳಬೇಡ.

**ಸುಲೋ:–** ಅಳಬೇಡವೆಂದರೆ ನೆನೆನೆನೆದು ಅಳುವಹಾಗೆ ಆಗುತ್ತದೆ ಮಗು. ಇಸ್ಪೇಟಿನ ಕೆಟ್ಟ ಚಟಕ್ಕೆ ಬಿದ್ದು ಮನೆಯನ್ನು ಮರೆತು ಹಗಲೂ ರಾತ್ರಿ

ಆಡುತ್ತ ಕುಳಿತಿರುತ್ತಾರೆ; ಮನೆಯಲ್ಲಿ ಹೆಂಡರು ಮಕ್ಕಳ ಗತಿ ಏನು ಆವಂಗೆ ಆರಿವೇಯಿಲ್ಲ. ಮಣ್ಣು ಬಿತ್ತಿ ಹೊನ್ನು ಬೆಳಿಯತಕ್ಕ ತೋಟ ವನ್ನು ಮಾರಿದರು; ಮನೆ ಉಳಿಯಲಿಲ್ಲ; ಮನೆಯಲ್ಲಿಯ ಡಾಗಿನ ಸಾಮಾನುಗಳೂ ಉಳಿಯಲಿಲ್ಲ. ಅಲ್ಲದೆ ಹೆಂಡತಿಯ ಕೊರಳೊಳಗಿನ ಸರವನ್ನು ಹರಕೊಂಡು ಅಪಮಾನ ಮಾಡಿ ಹೊರಗೆ ಹಾಕಲೂ ಅಂಜ ಲಿಲ್ಲ. ಇಷ್ಟು ರೀತಿಯಿಂದ ಕಾಡಲಿಕ್ಕೆ ಹಚ್ಚಿದ ಆ ಇಸ್ಪೇಟಿನ ಆಟಕ್ಕೆ ಮುಳ್ಳುಬಡಿಯಬಾರದೆ. ಹಾಯ್ ಭಾರತಮಾತೆ, ಜನ್ಮದಾತೆ ಸಾಕು! ಸಾಕು! ಸಾಕು!!! ಈ ಜನ್ಮ. (ವಿಷ ಕುಡಿಯಹೋಗುವಳು ಬಾಲಕನು ಬಂದು ಹಿಡ್ಕಿಯುವನು.)

**ಚಂ:**– ತಡೆ ಅಮ್ಮಾ; ತಡೆ. ನೀನು ಪಡುತ್ತಿರುವ ಕಷ್ಟವೆಲ್ಲವನ್ನೂ ಒಳಗಣ್ಣಿನಿಂದ ನೋಡುತ್ತಿರುವಳು ಭಾರತಮಾತೆ. ಇದೇ ರೀತಿ ಅಪ್ಪ ನಿಗೆ ಬೋಧ ಮಾಡುತ್ತ ಇರು; ಅವನಿಗೆ ತಾನಾಗಿಯೇ ಬುದ್ಧಿ ಬರು ವದು. ನೀನು ಈಗ ಮಾಡುತ್ತಿರುವ ಕೃತಿ ಬಹಳ ಹೇಸಿಗೆಯದು; ನೀನು ಸತ್ತರೆ ನನ್ನಗತಿ.

**ಸುಲೋ:**– ಮಗು ನೀನು ದಿನಾಲು ದೇವಿಯ ಚಿತ್ರವೆಂದು ಪೂಜೆ ಮಾಡು ತ್ತಿದ್ದೆಯಲ್ಲ, ಅವಳೇ ಇಂದು ನಿನಗೆ ಈ ಬುದ್ಧಿ ಕೊಟ್ಟು ಹೇಳಹಚ್ಚಿ ದಂತೆ ಕಾಣುತ್ತದೆ.

**ಚಂ:**– ಭಾರತಮಾತೆಯ ಚಿತ್ರವೇನು?

**ಸುಲೋ:**– ಹೂಂ........ಅವಳೇ ದೇವಿ.

**ಚಂ:**– ಅವ್ವಾ ದೇವಿಯ ಪೂಜೆಗೆ ಹೊತ್ತಾಗುತ್ತದೆ, ನಡೆ ಅವ್ವಾ ನಡೆ; ಮನೆಗೆ ಹೋಗೋಣ.

**ಸುಲೋ:**– ಎಲ್ಲಿರುವದಪ್ಪ ಮಗು ಮನೆ.

**ಚಂ:**– ಇರುವದಲ್ಲಮ್ಮ ನಮ್ಮ ಮನೆ.

**ಸುಲೋ:**– ಅದನ್ನು ಬೇರೆದವರಿಗೆ ಕೊಟ್ಟಿರುವರು ಮಗು.

ಚಂ-ಃ ಯಾರಮ್ಮಾ ಅವರು. ನಮಗ ಇಲ್ಲದಾಗ ಅವರಿಗೇಕೆ ಕೊಡುವದು.

ಸುಲೋ:- ಭಾರತಮಾತೆ, ನಾನು ಈ ಹೊತ್ತಿನೊಳಗಾಗಿ ಏನಾಗುತ್ತಿದ್ದೆನೋ ನೀನೇ ಬಲ್ಲಿ. ಆದರೆ ಇನ್ನೂ ನನ್ನ ಪತಿಯ ಸೇವೆ ಮಾಡಲು ಹಚ್ಚಿರುವಿ. ಆದರ ಭಾರ ನನ್ನದೇ! ಒಳಗಣ್ಣಿನಿಂದ ನನ್ನನ್ನು ನೋಡುತ್ತಿರು. ನನ್ನ ಒಡಹುಟ್ಟಿದ ಅಕ್ಕಗಳಿರಾ, ನೋಡಿರಿ ನೋಡಿರಿ ಕಣ್ಣು ತೆರೆಯಿರಿ; ಗಂಡನು ಕೊಡುತ್ತಿರುವ ಕಷ್ಟವನ್ನು ಸಹಿಸಲಾರದೆ ವಿಷವನ್ನು ತೆಗೆದುಕೊಳ್ಳಲು ಹೋದರೆ ಅಪ್ರತ್ಯಕ್ಷವಾಗಿ ದೇವಿಯು ಮಗನ ಬಾಯಿಂದ ಇನ್ನು ಪತಿಯ ಸೇವೆ ಮಾಡಬೇಕು; ಪತಿಗೆ ಬುದ್ಧಿಯನ್ನು ಹೇಳಬೇಕು; ಬಂದ ಕಷ್ಟವನ್ನು ಸಹಿಸಬೇಕು. ಅಂದರೇನೇ ಹೆಣ್ಣಿನ ಜನ್ಮ ಸಾರ್ಥಕ! ಎಂದು ಹೇಳಿದಳು; ತಿಳಿಯಿರಿ. ನೀವೇ ತಿಳಿಯಿರಿ, ಹೆಣ್ಣುಮಕ್ಕಳು ಎಷ್ಟು ಕಷ್ಟವನ್ನು ಅನುಭವಿಸಬೇಕೆಂಬುದನ್ನು! ನಡೆ ಮಗು ಹೋಗುವಾ. (ಹೋಗುವರು.)

ಪೋಲಿಸರು (ಇಬ್ಬರು) ಅವಳು ಹೋದನಂತರ ಬರುವರು.

೧ ನೆಯವ:- ವೀರಪ್ಪ, ಈ ದುಶ್ಚಟಕ್ಕೆ ಬಿದ್ದ ಜನರ ಬಗ್ಗೆ ಒಬ್ಬರು ದೇಶಭಕ್ತರಂತೆ ಅವರ ಯುನೀಸೆಲ್ಸ B. M. D. ಅಂತೆ. ಈಗ ಅವರು ೪ ಅರ್ಜಿ ಆಯಿತು; ನಮ್ಮ ಫೌಜದಾರರ ಕಡೆಗೆ ಮಾಡಿಕೊಂಡು. ನಾನು ಅದರ ಯುನ್‌ಕ್ವಾಯರ್‌ಗೆ ಹೋಗಬೇಕೆಂದು ೨-೩ ಸಾರೆ ಕೇಳಿದೆ; ಬೇಡವೆಂದೇ ಹೇಳುತ್ತಾರೆ. ಆ ಮಹಾರಾಯರಾದರೂ ಸ್ವತಃ ಒಮ್ಮೆ ಬಂದು ಕರೆದುಕೊಂಡು ಹೋಗಬಾರದೆ?

೨ ನೆಯವ:- ನಮ್ಮ ಫೌಜದಾರರಿಗೆ ಅವರಿಂದ ಏನಾದರೂ ಲಾಭ ದೊರೆಯುತ್ತಿರಬಹುದು. ಅಂತೆಯೇ ನಮಗೆ ಅವರು ಹೋಗಿರೆಂದು ಆರ್ಡರ್ ಮಾಡಲೊಲ್ಲರು.

೧ ನೆ:- ಎಸ್, ವ್ಹೆರಿಗುಡ್; ಒಳ್ಳೇ ವಿಚಾರ ನೋಡು ನಿನ್ನದು. ನನಗೂ ಕೂಡಾ ಅದೇ ಸಂಶಯ; ಏಕೆಂದರೆ ಬಾಯಲ್ಲಿ (ಕಿವಿಯಲ್ಲಿ ಹೇಳುವನು.)

೨ ನೆ:- ಹಾ, ಆ ಊರವರು ಬಂದಿದ್ದರೆ? ನೋಡಿದೆಯಾ? ಅಂದರೆನೆಯೇ ಹೀಗೆ ಮಾಡುವರು ನಮ್ಮ ಫೌಜದಾರಸಾಹೇಬರು. ವೀರಪ್ಪ, ಬಾ ಹೀಗೆ; ಒಂದು ದಿನ ನಾವಿಬ್ಬರೂ ಲೀವ್ ತೆಗೆದುಕೊಳ್ಳುವಾ. ಅಂದಿನ ದಿನವೇ ಆ ಊರಿಗೆ ಹೋಗೋಣ. ಆ ಮೇಲೆ ತಿಳಿಯುವಾ; ಅದರ ಸ್ಥಿತಿ. ತಿಳಿಯಿತೇ!

೧ ನೇ:- ಇಂಪಾಸಿಬಲ್. ಬೇಡ, ಬೇಡ; ಹೋಗುವದು ಬೇಡ.

೨ ನೇ:- ನೋ ಹೆಡ್; ತಲೆನೇ ಇಲ್ಲ. ನಾನು ಹೇಳುವದನ್ನು ಸ್ವಲ್ಪ ವಿಚಾರದಲ್ಲಿ ತೆಗೆದುಕೊ; ಸೆನ್ಸ ಆವೆನೋ, ಇಲ್ಲವೋ ನಿನಗೆ?

೧ ನೆ:- ಒಳ್ಳೇದು, ನಡೆ ಹಾಗಾದರೆ. ಇಂದೇ ಲೀವ್ ಬರಕೊಟ್ಟು ಹೋಗೋಣ.

೨ ನೆ:- ಬಾ, ಹೋಗೋಣ. (ಹೋಗಹತ್ತುವರು.)

(ಬಂಗಾರಿ ಬುಟ್ಟಿ ತೆಗೆದುಕೊಂಡು ಬರುವಳು.)

ಬಂ:- ಅವ್ವಯ್ಯಾ! ಯಾರ್‍ರಿಯುಪ್ಪ ನೀವು ಪೋಲೀಸರಾಂಗ ಡಿರೇಸ ಮಾಡಿರಲ್ಲ. ಪೋಲೀಸರೇನ ನೀವು?

೧ನೆ:- ಹೌದವ್ಮ! ಪೋಲೀಸರು ನಾವು! ನೀನಾರವ್ಮ ಎಲ್ಲಿಗೆ ಹೋಗಿದ್ದೆ?

ಬಂ:- ನವ್ಮ ಹೊಲ್ದಾಗ ಗೊಬ್ಬರ ಹಾಕ ಗುಂಡಿ ಮಾಡೇವರೀ, ಅದಕ್ಕ ಶಗಣಿ ಹಾಕಿಬರಾಕ ಹೋಗಿದ್ದಿನಿರಿ.

೨ ನೆ:- (ತೋರಿಸಿ) ಆ ಮನೆಯಿಂದ ಹೊರಗೆ ಬಂದೆಲ್ಲ; ಅದೇ ಏನಪ್ಪ ನಿಮ್ಮ ಮನೆ?

ಬಂ:- ಆದರ್‍ರ್ಯಾ! ಸಂಗಪ್ಪನ ಗುಡಿರಿಯಪ್ಪಾ. ಹೊಳ್ಯಾಗ ಕೈಕಾಲ ಮಾರಿ ತೊಳಕೊಂಡ ದ್ಯಾವರಿಗೆ ನಮಸ್ಕಾರ ಮಾಡಿ ಬಂದಿನಿರಿ.

೧ ನೇ:- ನಿನ್ನ ಊರ ಯಾವುದವ್ಮ?

ಬಂ:- ನಮ್ಮೂರು ಕಿದಿಯೂರ್‍ರಿ, ಅಲ್ಲೆ ಗಿಡದ ಗುಂಪು ಕಾಣಸದಿಲ್ಲರ್‍ಯಾ ಅದ ನಮ್ಮೂರು. ಆಲ್ರಿ ಪೋಲೀಸಪ್ಪಾರ, ನಮ್ಮೂರಾಗ ಇಸ್ಪೇಟಿನ ಆಟ,

ಶಿರೆ ಕುಡಿಯೋಣು, ಗಾಂಜಿ ಸೇದದ ಬಾಳ ಆಗೇದ; ನೀವು ಯಾರರ ಬಂದು ಬಿಗಿಮಾಡಬೇಕ; ನಿವೆಂತರಿಯಪ್ಪ. ನಿಮಗ ಪೋಲೀಸರಿ ಬರದಕಿಂತ ನಮ್ಮಂತ ಹೆಂಗಸರಿಗೆ ಬಂದಿದ್ದರ ಇವರನ್ನ ಹಿಡಕೊಂಡ ದರದರ, ನಾಯಿ ಎಳಕೊಂಡ ಹೋದಾಂಗ ಎಳಕೊಂಡು ಹೋಗಿ ಜೇಲಿನಾಗ ಕೂತ್ರಸತಿನ್ನಿವಿ.

೨ ನೆ :- (ನಗುತ್ತ) ಇರಲಿ ಅವ್ವಾ, ನಾಳೆ ಬರಬೇಕೆಂದು ಮಾಡಿರುವೆವು!

ಬಂ:- ಕರೆವಂದರೂ ಬರತೀರ್ಯಾ? ನನಗ ಹೊತ್ತಾಗತತರಿ; ಹೋಗತೀನಿ. ನಾ ಅಂದದ್ದ ಏನರ ಮನಸಿಗೆ ಹಚಿಕೊಂಡ್ರಿ ಏನ್ರಿ ಮತ್ತ.

(ಹೋಗುವಳು.)

೧ ನೆ:- ವೀರಪ್ಪ, ನಾವು ನಾಳೆ ಹೋಗಲೇಬೇಕು. ಸಾರ್ನಿಂಗಿಗೆ ಲೀವ್ ಕೇಳಿಟ್ಟು ಲೇಟ ಮಾಡದೇ ಹೋಗಿಯೇ ತೀರೋಣ; ನಡೆ. ಹೋಗುವಾ ನಡೆ. (ಹೋಗುವರು)

(ಇಸ್ಪೇಟಿನ ಆಟಕಾರರ ಮನೆ)

ರಾ: ಎಕ್ಕಣ್ಣ, ಊರಲ್ಲಿ ಪೋಲೀಸರು ಬಂದಿರುವರಂತೆ; ಇಂದು. ನಮ್ಮ ಆಟದ ಬಗ್ಗೆ ಹೇಗೆ ಮಾಡೋಣ?

ಎ:- (ನಗುತ್ತ) ರಾಜಣ್ಣ! ಪೋಲೀಸರು ಅಂದಕೂಡಲೆ ನಿನಗೆ ಬೆದರಿಕೆ ಯಾಯಿತೆ; ಛೇ, ಹುಚ್ಚ. ಅವರಾದರೂ ಸಂಪನ್ನರೂ ಅಂತಾ ತಿಳಿದೀದೇನ.

ರಾಣಿ:- ಏನಾದರೂ ಆಗಲಿ, ನಾರಾಯಾ; ಅವರನ್ನು ನಂಬಲಿಕ್ಕೆ ಬರುವ ಹಾಗಿಲ್ಲ. ಏಕೆಂದರೆ ಆಟದಲ್ಲಿ ತಮಗೆ ಗೆಲವು ಆಯಿತೆಂದರೆ ಸುಮ್ಮನೆ ಕುಳಿತು ಆಡಿ ಗೆದ್ದುಕೊಂಡು ಹೋಗುವರು. ಒಂದು ವೇಳೆ ಸೋಲು ಬಂದಿತೆಂದರೆ ತೀರಿತು; ಆಗಲೇ ಹಿಡಿಯುವರು. ಬೇಡವೇಬೇಡ; ಅವರ ಸಹವಾಸವೇ ಬೇಡ. ಏ ದಲಾಲಿ ಬಾ ಹೀಗೆ; ಈ ೧೦೦ ರೂಪಾಯಿಗಳನ್ನು ಅವರಿಗೆ ಕೊಟ್ಟು ಇಲ್ಲಿಗೆ ಬರದಂತೆ ಮಾಡು; ತಿಳಿಯಿತೇ; ಹೋಗು. (ಹೋಗುವನು.)

ರಾ:- (ನಗುತ್ತ) ಎಕ್ಕಣ್ಣ ರಾಣಿಯು ಎಷ್ಟು ಅಂಜುವನು ನೋಡು.

ಎ:- ರಾಣಿ, ಅಂಜುಬುರುಕ ಪ್ರಾಣಿ.

ರಾಣಿ:- ಇರಲಿ, ಎಕ್ಕಣ್ಣ; ನಡೆಯಿರಿ ಹೋಗುವಾ. (ಹೋಗುವರು.)

(ಮತ್ತೊಂದು ಕಡೆಯಿಂದ ಪೋಲೀಸರು ಬರುವರು. ದಲಾಲಿ ಬಂದು ರೊಕ್ಕ ಕೊಟ್ಟು ಹೋಗುವನು. ಎದುರಿನಿಂದ ಬಂಗಾರಿಯು ನೀರಿನ ಕೊಡ ತೆಗೆದುಕೊಂಡು ಬರುವಳು.)

ಬಂ:- ಯಾಕರಿ ಎಪ್ಪಾ, ಯಾವಾಗ ಬಂದಿರಿ. ನೀವ ಅಲ್ರ್ಯಾ ನಿನ್ನೆ ಹೊಲದ ದಾರ್‍ಯಾಗ ಕೂಡಿದವರು?

೧ನೆ:- ಹೌದು; ನಾವೆ ಕೂಡಿದವರು.

ಬಂ:- (ನಗುತ್ತ) ನಂಗೂ ಒಂಜರಾ ಗೊತ್ತಹತ್ತಿರಿ.

೨ ನೆ:- ನಿಮ್ಮೂರೊಳಗ ಇಸ್ಪೇಟಿನ ಆಟ ಆಡತಾರ, ಶೆರೆ ಮಾರತಾರ, ಅಂದೆಲ್ಲ ಎಲ್ಲಿ; ಅದು ಸ್ವಲ್ಪ ಗುಪ್ತ ತಿಳಿಸುವಿಯಾ.

ಬಂ:- ಆ ಆಳ್ಳಿ ಗಿಡ ಅದ ಅಲ್ರಿ, ಅಲ್ಲಿಂದ ಎಡಕ್ಕ ಹೊಳ್ಳಬೇಕರಿ; ಅಲ್ಲೆ ಆಟದ ಮನಿ ಸಿಗತೈತರಿ. ಹಂಗ ಮುಂದಕ ನೀಟಾಗಿ ಹೋಗಿ ಬಲಕ್ಕ ಹೊಳ್ಳಬೇಕರಿ; ಒಂದು ಬಿದ್ದ ಮತಿ ಐತರಿ; ಅದ ಮನಿ ಶೆರೆ ಮಾರಂದು. ನೋಡರಿಯಪ್ಪ, ಹೋಗರಿ; ನನಗೂ ಒಜ್ಜಿ ಆಗೇತಿ; ಮನಿಗೆ ಹೋಗ ಶೀನಿ. ಅವರನ ಎಲ್ಲಾರನ ಹಿಡಿಬೇಕ ನೋಡಿರಿ; ಅವರ ಉಪದ್ದರ ಬಾಳ ಆಗೇತಿ ಊರಾಗ.

(ಹೋಗುವಳು.)

( ತೆರೆ ಬೀಳುವದು. )



## ೭ ನೆಯ ದೃಶ್ಯ

(ಕಿದಿಯೂರಲ್ಲಿಯ ಒಂದು ಓಣಿ, ಬಾಬೂರಾಯ ಗುಂಡೂರಾಯರ ಆಪ್ತಾಲೋಚನೆ.)

ಬಾ:– ಗುಂಡಣ್ಣಾ, ಊರಲ್ಲಿ ಪೋಲೀಸರು ಬಂದಿರುವರಂತೆ. ಅವರಾದರೂ ಕೂಡಾ ಈ ಜನರಲ್ಲಿಯೇ ಸೇರಿ ತಮ್ಮ ಕೆಲಸವನ್ನು ಸಾಧಿಸಿಕೊಂಡು ಹೋಗುವರೋ, ಅಥವಾ ತಮ್ಮ ನೌಕರಿಯ ಜವಾಬ್ದಾರಿಯ ಕೆಲಸ ಮಾಡುವರೋ ನೋಡೋಣ; ನಡೆ.

ಗುಂಡೂ:– ಅವರ್‍ಯಾ ಅಪ್ಪಾರಾ; ತಮ್ಮ ಕೆಲಸ ಮನಮುಟ್ಟಿ ಮಾಡಿದ್ದರ ಈ ಕಳ್ಳತನ ಎಲ್ಲಿ ಉಳಿತಿತ್ರಿ. ಇಷ್ಟತಿಗೆ ಹೇಳಾಕಹೆಸರಿಲ್ಲದೆ ಓಡಿ ಹೋಗತಿತ್ತ.

ಬಾ:– ಛೇ, ಗುಂಡಣ್ಣಾ! ನಿನ್ನ ತಿಳಿವಳಿಕೆ ತಪ್ಪು! ತಮ್ಮ ಕೆಲಸವನ್ನು ಚನ್ನಾಗಿ ಮಾಡದಿದ್ದರೆ ಇಲ್ಲಿಯ ವರೆಗೆ ಅವರ ನೌಕರಿ ಹೇಗೆ ಉಳಿಯ ಬೇಕೊ?

ಗುಂಡೂ:– ಅಪ್ಪಾರ ನಾನು ಹೇಳದು ಸುಳ್ಳ ಆದರ ಶಿರೆ ಮಾಡುವವರ ಮನಿ ಪತ್ತೆ ಹಚ್ಚಿಕೊಂಡ ಹೋಗಿ ನೋಡನ ಬರ್‍ರಿ.

ಬಾ:– ನಡೆ ಹಾಗಾದರೆ; ಒಂದು ವೇಳೆ ಅವರು ತಮ್ಮ ಕೆಲಸದಲ್ಲಿ ನಿರತರಾಗದೇ ಬೇಜವಾಬ್ದಾರಿಯಿಂದ ಇದ್ದದ್ದೆ ಖರೆ ಆದರೆ ಅವರನ್ನು ಸಹ ಹಿಡಿಸಿಬಿಡೋಣ.

(ಗಂಗಮ್ಮ ಬರುವಳು. ಕೈಯಲ್ಲಿ ನೂಲು ರಾಟಿ)

ಬಾ:– ಏನು ಗಂಗಮ್ಮ ಎಲ್ಲಿಗೆ ಹೊರಟಿರುವಿ?

ಗಂ:– ನಿಮ್ಮ ಮನಿಗೆ ಹೊರಟನ್ರಿ; ಶಾರದವ್ವನರು ನಾನು ನೂತಿದ್ದು ನೂಲು ಎಲ್ಲ ತೆಗೆದುಕೊಂಡು ಬಾ ಎಂದು ಹೇಳಿರುವರು. ಅಪ್ಪಾರ, ಈ ೩ ದಿವಸದಾಗ ನನಗ ನೂಲದ ಕಲಿಸ್ಯಾರ್‍ರಿ; ಅವ್ವಾರು. ಸ್ವಲ್ಪ ದಿವಸದಲ್ಲಿ ಇಷ್ಟು ನೂಲು ನೂತನರಿ.

ಬಾ:- ಇರಲಿ ಅವ್ವಾ, ಸೆಯ್ಯುವದನ್ನೂ ಅವಳ ಹತ್ತಿರ ಕಲಿ. ಅಂದರೆ ನಿನಗೆ ಉಳಿತಾಯವಾಗುತ್ತದೆ.

ಗಂ:- ಹೂನ್ರಿಯಪ್ಪಾ, ಕಲಸತೇನಿ ಅಂದಾರ್ರಿ; ಅವ್ವಾರು. ಆದರ ಇನ್ನೂ ೧ ತಿಂಗಳಾದ ಮೇಲೆ ಕಲಸತಾರಂತ್ರಿ.

ಬಾ:- ಹೌದ; ಮತ್ತೆ ಮೊದಲು ನೂಲುವದು, ಕೆಚ್ಚುವದು, ತೋಡು ವದು ಇವೆಲ್ಲ ಬರಬೇಕು. ಇರಲಿ ಗಂಗವ್ವಾ, ಇಲ್ಲಿ ಶೆರೆ ಮಾರುವ ಮನೆ ಎಲ್ಲೆಲ್ಲಿ ಇರುವವು; ನಿನಗೆ ಗೊತ್ತುಂಟೋ?

ಗಂ:- ಬಹಳ ಅದಾವರಿ ಎಪ್ಪಾ. ಲಿಂಗವಂತರ ಓಣ್ಯಾಗ ಸಹ ಅದಾ ವರಿ. ಬಾಳ ಅಂದರ ತಳವಾರ ಓಣ್ಯಾಗರಿಯಪ್ಪ.

ಗುಂಡೂ:- ಇರಲಿ ಗಂಗವ್ವಾ, ನೀನು ಹೋಗು ನಿನ್ನ ಕೆಲಸಕ್ಕ; ತಡಾ ಆಗಿ ಹೋದರ ಶಾರದವ್ವನರ ಬೈದಗೀದಾರ. (ಹೋಗುವಳು.)

ಗುಂಡೂ:- ಅಪ್ಪಾರ ಬರ್ರಿ; ಹೋಗೋಣ ಬರ್ರಿ. ಬರೆ ಶೆರೆ ಮಾರುವವ ರನ್ನ ಅಷ್ಟ ಅಲ್ಲ; ಆವರ ಸಂಗಡ ಪೋಲೀಸರನ್ನೂ ತೋರಿಸತೇನಿ ಬರ್ರಿ; ಹೋಗೋಣ. (ಹೋಗುವರು.)

(ಶೆರೆಮಾಡುವವರ ಮನೆ ಪೋಲೀಸರೂ ಕೂಡ ಕುಡಿಯುತ್ತಕುಳಿತಿರುತ್ತಾರೆ.)

ಗುಂಡೂ:- ನೋಡ್ರಿ, ಅದೇ ಮನೆ.

ಬಾ:- ಓಹೋ ಹೀಗೇನು. ಗುಂಡೂರಾಯ ಬಹಳ ದಾಂದಲಿ ನಡೆದಿರು ವದಲ್ಲ.

ಗುಂಡೂ:- ಯಾರ ಹೆದರಿಕಿರಿ ಯಪ್ಪ ಅವರಿಗೆ. ಪೋಲೀಸರಽಽ ಅವರ ಚಿಗಪ್ಪನ ಮಕ್ಕಳು, ಅಂದಮ್ಯಾಲೆ ಯಾರ ಹೆದರಿಕಿರಿ ಅವರಿಗೆ.

ಬಾ:- ಬಹುತೇಕ ಪೋಲೀಸರೂ ಇರಬಹುದೇನು.

ಗುಂಡೂ:- ಬಹುದು, ಪಹುದು, ಬಿಟ್ಟಬಿಡ್ರಿ ನೀವು; ದೇವರಾಣೆಅಂದರೂ ಅವರು ಅಲ್ಲೇಽ ಅದಾರ. ಬೇಕಾರ ಯಾರನರ ಒಬ್ಬರನ ಕಳಿಸಿ ಕೊಡ್ರಿ; ಬರೆ ನೋಡಿಕೊಂಡು ಬರಲಿ.

(ಕವಾಟಿನ ಕಡೆಗೆ ಒಬ್ಬನನ್ನು ಕರೆದು ಹೇಳುವನು.)

ಬಾಃ— (ಕಿವಿಯಲ್ಲಿ ಹೇಳುವನು.)

ಒಬ್ಬವ:— (ನೋಡಿ ಬಂದು) ಆದಾರ್ರಿ; ಕುಡಿಯುತ್ತ ಕುಳಿತಿರುವರು. (ಹೋಗುವನು.)

ಗುಂಡೂ:— ನಾ ಹೇಳಲಿಲ್ರಿ, ನನ್ನ ಮಾತ ಖರೇರಿ.

ಬಾಃ— ಛೀ, ಗೌಜಮಾಡಬೇಡೋ; (ಕಿವಿಯಲ್ಲಿ ಹೇಳಿ ಒಂದು ಚೀಟಿ ಬರೆದುಕೊಡುವನು; ಗುಂಡು ಓಡಿಹೋಗಿ ಫೌಜದಾರರನ್ನು ಕರೆದು ಕೊಂಡು ಬರುವನು.)

ಬಾಃ— ನಮಸ್ತೆ ಬರಬೇಕು.

ಫೌಜದಾರ:— ಏನು ದೇಶಭಕ್ತ ಬಾಬುರಾಯರೇ! ಎಲ್ಲಿರುವದು ಆ ಸ್ಥಳ.

ಬಾಃ— (ಸಾವಕಾಶ) ಕರೆದುಕೊಂಡು ಮನೆಯನ್ನು ಹೋಗುವರು. ಆವರೆಲ್ಲರನ್ನೂ ಹಿಡಿದು ಹೊರಗೆ ತರುವರು. ಮತ್ತು|ಜೇಲಿಗೆ ಕಳು ಹಿಸುವರು.)

ಫೌ:— ನಡೆಯಿರಿ, ಹೋಗುವಾ. (ಬಾಬುರಾಯರಿಗೆ) (ಮತ್ತೊಂದು ಓಣಿಯಿಂದ ಹಾಯ್ದು ಹೋಗುವರು. ಬಾಬುರಾಯ, ಫೌಜದಾರ, ಗುಂಡೂ.)

ಗುಂಡೂ:— ಫೌಜದಾರ ಸಾಹೇಬರ, ಬರ್ರಿ ಇಲ್ಲೆ. (ಇಸ್ಪೇಟಿನ ಆಟ ಗಾರರ ಮನೆಗೆ ಹೋಗುವರು. ೪-೫ ಜನರನ್ನು ಹಿಡಿದುಕೊಂಡು ಹೊರಗೆ ಬರುವರು.)

ಗುಂಡೂ:— ಇವರದಂತೂ ಬಹಳ ಉಪಟಳ ಆಗೇತ್ರಿ; ಈ ಛೀಮಾರಿ ಗಳಿಗೆ. ಲಗ್ನಆಗೇತಿ, ಹೆಂಡ್ರು ಆದಾರೇನ ಕೇಳ್ರಿ. (ಎಕ್ಕಣ್ಣನ ಕಡೆಗೆ) ಈ ಮಹಾ ಮಾರಾಯನ್ನ ಕೇಳ್ರಿ. ಹೊಲಾಮನಿ, ತಾಳಿ ಸರ ಉಳದಾವೇನ ಕೇಳ್ರಿ. [ಅವರ ಕಡೆಗೆ] ಥೂ, ಮೂಳಗೂಳ ಯಾಕ ನೋಡತೀರಿ; ಬಂಗಾರಿ ಗಂಡನ ಬಂಗಾರದಂಥ ಮುಖಾನ.

ನನ್ನ ಮಾರಿ ಸಹಿತ ಕರ್ರಗ ಆದೀತು. ಅಪ್ಪಾರ, ಇವರನ ನೀವು ಏನೇನು ಕೇಳಬ್ಯಾಡರಿ; ಸುಮ್ಮನ ಕಂಬ ಇಲ್ಲದ ಮನೆಗೆ ಒಯ್ರಿ.

ಫೌ:- [ಆಳುಗಳಿಗೆ] ಬಂಧಿಸೋ, ಇವರನ್ನು.

(ಬಂಧಿಸಿಕೊಂಡು ಒಯ್ಯುವರು.)

( ತೆರೆ ಬೀಳುವದು. )

## ೮ ನೆಯ ದೃಶ್ಯ

( ಬಾಬುರಾಯ, ಗುಂಡೂರಾಯ ಬಾಬುರಾಯನ ಕೈಯಲ್ಲಿ ಪೇಪರು )

**ಗುಂಡೂ:-** ಅಪ್ಪಾರ, ಇವತ್ತಿನ ವರ್ತಮಾನ ಪತ್ರದಾಗ ಏನೇನ ಬಾಳ ಬಾಳ ಛೀಪೇತಂತಲ್ರಿ ಎಪ್ಪ; ಓದರಿ ಎಪ್ಪ ನೋಡೋಣ.

ಬಾ:- ಒಟ್ಟು ೧೮ ಜನರ ಬಂಧನ. ೬ ಜನರು ಇಸ್ಪೇಟಿನ ಆಟಗಾರರು, ೮ ಜನರು ಶರೆ ಮಾರುವವರು, ಹಾಗು ಕುಡಿಯುವವರು; ಕುಡಿಯುವ ಜನರಲ್ಲಿಯೇ ೨ ಜನ ಪೋಲೀಸರ ಬಂಧನ.

**ಗುಂಡೂ:-** ಅಲ್ರಿಯಪ್ಪಾ, ಗಾಂಜಿಸೇದರನ ಹಿಡಿಸಿತ್ತ ಅಲ್ರಿ ಎಪ್ಪ.

ಬಾ:- ಅದನ್ನು ಕೆಳಗೆ ಕೊಟ್ಟಿರುವರು. ತಡಿಯೋ, ಬಲು ಹರುಷಪಾ ಗುಂಡೂರಾಯ ನಿನಗೂ.

**ಗುಂಡೂ:-** ಆಗಾಕಿಲ್ಲ ಏನ್ರಿ; ಕಸರತ್ತ ಮಾಡೇನಿ.

ಬಾ:- ೪ ಜನ ಗಾಂಜಿ ಸೇದುವವರು.

**ಗುಂಡೂ:-** ಅಲ್ರಿಯಪ್ಪ, ಅವರನ್ನ ಏನ ಮಾಡತಾರ್ರಿ.

ಬಾ:- ಇಸ್ಪೇಟಿನ ಆಟಗಾರರಿಗೆ ೩ ವರ್ಷ ಕಠಿಣ ಶಿಕ್ಷೆ, ಶೆರೆ ಮಾರುವವರಿಗೆ ೬ ವರ್ಷ ಸಾದಾ ಶಿಕ್ಷೆ, ಕುಡಿಯುವವರಿಗೆ ೭ ವರ್ಷ ಉಗ್ರಶಿಕ್ಷೆ, ಗಾಂಜಿ ಸೇದುವವರಿಗೂ ೩॥ ವರ್ಷ ಸಾಧಾ ಶಿಕ್ಷೆ ವಿಧಿಸಲಾಗಿದೆ.

ಮತ್ತು ಇನ್ನು ಮುಂದೆ ಈ ಕಳ್ಳಪೇಟಿ ಮಾಡುವವರಿಗೆ ಕಠಿಣ ಕ್ರಮ ಕೈಕೊಳ್ಳಲಾಗುವದು; ಆ ಬಗ್ಗೆ ಒಂದು ಖಾತೆಯನ್ನೇ ನಿರ್ಮಾಣ ಮಾಡಲಾಗಿದೆ.

ಗುಂಡೂ:- ನೋಡ್ರಿಯಪ್ಪ, ನಮ್ಮ ಸರಕಾರದಾಗ ಹಿಂಗ ಮಾಡದಿಲ್ಲ ಅಂತಿದ್ದಿರಿ; ಯಾರ ಕೇಳತಾರ್ರಿ, ಇಂತ ದೇಶ ಹಾಳಾಗ ದಗದ ಮಾಡಿ ದರ. ಇನ್ನ ಮ್ಯಾಲರ ಎಚ್ಚರದಿಂದ ಇರ್ರಿ; (ಬಾಬುರಾಯನ ಕಡಿಗೆ) ಅಲ್ರಿಯಪ್ಪ, ಹಿಡಕೊಂಡ ಹೋದವರ ಹೆಂಡರ ಗತಿ ಏನರಿ.

ಬಾ:- ಅದಕ್ಕೂ ಒಂದು ಯೋಜನೆ ಕೈಕೊಂಡಿದ್ದಾರೆ; ಈಗ ಹೋದ ಜನರ ಹೆಂಡಂದಿರಿಗೆ ಅಷ್ಟೇ. ಬಂಧಿತ ಜನರ ಹೆಂಡಂದಿರ ಬಗ್ಗೆ ಅವರು ಬರುವವರೆಗೆ ಆಸ್ತಿಯ, ಇರುವಿಕೆಯ, ಜೀವನದ ಬಗ್ಗೆ ಸರಕಾರವು ವ್ಯವಸ್ಥೆ ಮಾಡಲಾಗುವದು. ಅಂದರೆ ಹೋದ ಮನೆ, ಹೋದ ಹೊಲ, ಅವೆಲ್ಲವನ್ನೂ ತಿರುಗಿಸಿ ಅವರ ಹೆಂಡರು ಮಕ್ಕಳನ್ನು ಸರಳವಾಗಿ ಜೀವನ ಸಾಗಿಸಲಿಕ್ಕ ಇಡುವರು.

ಗುಂಡೂ:- ಬೇಸ್ಯಾತ ಬಿಡ್ರಿಯಪ್ಪ; (ಜನರ ಕಡೆ) ನೋಡ್ರೆಪೋ ನೋಡಿ. ನೀವು ಬ್ಯಾರೆಗೀರೆ ತಿಳಕೊಂಡಿರಿ; ನಮ್ಮ ಮನ್ಯಾನರಿಗೂ ಸರಕಾರ ನೋಡತತೀ ಅಂತ; ಈಗ ಹಿಡಕೊಂಡ ಜನರಿಗಷ್ಟೇ, ಇನ್ನ ಮ್ಯಾಲಾರ ಸರಿಯಾಗಿ ಜೀವನದಿಂದ ಇರ್ರಿ; ನಮಸ್ಕಾರ ಹೋಗಿಬರತೇವಿ.

(ಮುಕ್ತಾಯದ ಹಾಡು)

ಭಾರತಮಾತಾಕಿ ಜೈ!
ಕರ್ನಾಟಕಮಾತಾಕಿ ಜೈ!!

ಮಂಗಲಂ

ಶರಣರ ಆತ್ಮ ದಿವ್ಯಾತ್ಮ!

ಅವರ ವಾಣಿ ಅಮೃತವಾಣಿ!!

ಶಾಂತಿಯನ್ನರಸುವವರಿಗೆ ಅಮೃತಧಾರೆ!!!

※

# ಅಮೃತವಾಣಿ

ಸಂಗ್ರಹ

ಹನುಮಂತರಾಯರು

# “ಶ್ರೀ ಗುರುವಿನ ಉಪದೇಶ”

( ಶ್ರೀಮನ್ನಿಜಗುಣ ಶಿವಯೋಗಿಗಳಿಂದ ಪ್ರಣೀತವಾದದ್ದು. )

ರಾಗ:– ನಾದನಾಮಕ್ರಿಯ

‘ ಶ್ರೀಗುರುವಚನೋಪದೇಶವನಾಲಿಸಿ ದಾಗಳಹುದುನರರಿಂಗೆ ಮುಕುತಿ ’

**ಅರ್ಥ:–** ಶ್ರೀಗುರುವಿನ ವಚನರೂಪವಾದ ಉಪದೇಶವನ್ನು ಮನಸ್ಸಿಟ್ಟು ಕೇಳಿ ಅದರಂತೆ ನಡೆದರೆ ಮನುಷ್ಯರಿಗೆ ಮೋಕ್ಷವಾಗುತ್ತದೆ.

ದುರಿತಕರ್ಮವನೊಲ್ಲದಿರು ಪುಣ್ಯವನೇ ಮಾಡು। ಹರನಡಿ
ವಿಡಿ ಶಾಂತರೊಡನಾಡು॥ ಕರುಣವಿರಲಿ ಜೀವರೊಳು ನೀತಿ
ವಿದನಾಗು। ಪೊರೆಪೊರ್ದಿದರನೆಂದು ಬೆಸಸುವ ॥೧॥

**ಅರ್ಥ:–** ಪಾಪ (ಕೆಟ್ಟ) ಕೆಲಸಗಳನ್ನು ಮಾಡಬೇಡಿ. ಪುಣ್ಯ (ಒಳ್ಳೆಯ) ಕೆಲಸಗಳನ್ನೇ ಮಾಡಿ. ಶಿವನನ್ನು ಮೊರೆಹೋಗಿ. ಜ್ಞಾನಿಗಳ ಸಹವಾಸ ದಲ್ಲೇ ಇರಿ. ದುಃಖಿಗಳಲ್ಲಿ ಕರುಣೆಯನ್ನು ಇಡಿ. ಧರ್ಮದಿಂದ ನಡೆಯಿರಿ. ನಂಬಿದವರನ್ನು ಕಾಪಾಡಿ.

ನಿಂದಿಸಿನುಡಿಯದಿರಾರನುಮನಸಿಗೆ। ಬಂದಂತೆ ನಡೆಯ
ದಿರಿಹದಲ್ಲಿ॥ ಕುಂದುಒಡೆಯದಿರು ಕಾಮಾದಿಗಳನು ಜಯಿ
ಸೆಂದು ಕೈವಿಡಿದನುಗ್ರಹಿಸುವ ॥೨॥

**ಅರ್ಥ:–** ಯಾರನ್ನೂ ದೂಷಿಸಬೇಡ, ಮನಸ್ಸಿಗೆ ಬಂದಂತೆ ನಡೆಯಬೇಡ, ಲೋಕದಲ್ಲಿ ಅಗೌರವವನ್ನು ಹೊಂದಬೇಡಿ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಬಿಡಿ.

ಭವಮಾಲೆಗಲಿಸು ಪುಸಿಯದಿರೆಡರು ಬಂದು। ಕವಿಯಲಂಜದಿರು
ಸಂಪದೊಳು॥ ತವೆಮುದವಳಿದಿರು ತತ್ವಸಂತತಿಯನು ವಿವರಿಸಿ
ನೋಡೆಂದು ತಿಳುಪುವ ॥೩॥

**ಅರ್ಥ**:– ಹುಟ್ಟುಸಾವುಗಳಿಗೆ ಹೆದರಿ ಸುಳ್ಳನಾಡಬೇಡಿ. ಕಷ್ಟ ಬಂದಾಗ ಹೆದರಬೇಡಿ. ಸಂಪತ್ತು ಬಂದಾಗ ವಿನಯವಿರಲಿ. ತತ್ವಗಳನ್ನು ನಿವಾರಿಸಿ ನಿಮ್ಮ ನಿಜವನ್ನು ತಿಳಿಯಿರಿ.

ಬಳಸದಿರದ್ವೈತವನು ಬಾಹ್ಯದಲ್ಲಿನಿಂ। ನೊಳಗೇಕೋಭಾವನೆಯ
ನೊಡಗೂಡು॥ ತಿಳಿದುಸಮಯ ನಿಷ್ಠೆಗೆಲಿ ವೇದವಿಧಿಭಕ್ತಿ
ಗಳನಗಲದಿರೆಂದುಸುರುವ ॥೪॥

**ಅರ್ಥ**:– ಎಲ್ಲವೂ ಒಂದೇ ಎಂದು ವ್ಯವಹಾರದಲ್ಲಿ ಆಚರಿಸಬೇಡಿ. ಎಲ್ಲವೂ ದೇವರೇ ಎಂದು ಭಾವನದಲ್ಲಿರಲಿ. ಮತಧರ್ಮವನ್ನು ಆಚರಿಸಿರಿ. ವೇದವಿಧಿಗಳನ್ನು ದೈವಭಕ್ತಿಯನ್ನು ಬಿಡಬೇಡಿ.

ಆರುನಾನೆಂದು ವಿಚಾರಿಸು ವಿಷಮಸಿಸಂ। ಸಾರವಿದನುಕನಸೆಂ
ದರಿಯೋ॥ ಮಾರಮರ್ದನ ಶಂಭುಲಿಂಗವನೊಲಿಸಿ ಗಂ।
ಭೀರ ಸುಖದೊಳಿರೆಂದರುಹುವ

**ಅರ್ಥ**:– ನಾನು ಯಾರು ಎಂದು ವಿಚಾರಮಾಡಿ ದುಃಖಮಯ ಸಂಸಾರ ವನ್ನು ಸ್ವಪ್ನವೆಂದು ತಿಳಿ. ಈಶ್ವರನನ್ನು ಒಲಿಸಿ ನಿತ್ಯಾನಂದ ರೂಪವಾದ ಮೋಕ್ಷವನ್ನು ಪಡೆಯಿರಿ.

**ಸತ್ಯ ಶಿವಂ ಸುಂದರಂ**



# "ಪ್ರಾರ್ಥನಾ"

## "ಶಾಂತಿಪದ"

ಓಂ ಆಸತೋಮಾ ಸದ್ಗಮಯ।
ತಮಸೋಮಾ ಜೋತಿರ್ಗಮಯ।
ಮೃತ್ಯೋರ್ಮಾ ಮೃತಂ ಗಮಯ॥
ಓಂ ಸಹನಾ ವವತು।
ಸಹನೌ ಭುನಕ್ತು। ಸಹವೀರ್ಯಂ ಕರವಾವಹೈ।
ತೇಜಸ್ವಿನಾವಧೀತಮಸ್ತು। ಮಾವಿದ್ವಿಷಾವಹೈ॥
ಓಂ ಶಾಂತಿಃ ಶಾಂತಿಃ ಶಾಂತಿಃ

ಕರಚರಣಕೃತಂ ವಾಕ್ಕಾಯಜಂ ವಾ ಕರ್ಮಜಂ ವಾ
ಶ್ರವಣ ನಯನ ಜಂವಾ ಮಾನಸಂ ವಾಽಪರಾಧಂ
ವಿಹಿತಮ ವಿಹಿತಂ ವಾ ಸರ್ವಮೇ ತತ್ ಕ್ಷಮಸ್ವ
ಜಯ ಜಯ ಕರುಣಾಬ್ಧೇ ಶ್ರೀಮಹಾದೇವಶಂಭೋ॥

ಹೇ ಜಗತ್ರಾತಾ ವಿಶ್ವವಿಧಾತಾ।
ಹೇ ಸುಖ ಶಾಂತಿನಿಕೇತನಹೇ॥
ಪ್ರೇಮಕೆ ಸಿಂಧು ದೀನಕೆ ಬಂಧು।
ದುಃಖದರಿದ್ರ ವಿನಾಶನಹೇ॥

ನಿತ್ಯಾಖಂಡ ಅನಂತ ಅನಾದಿ।
ಪೂರಣಬ್ರಹ್ಮಸನಾತನಹೇ॥
ಜಗಆಶ್ರಯ ಜಗಪತಿ ಜಗವಂದನ।
ಅನುಪಮ ಅಲಖನಿರಂಜನಹೇ॥
ಪ್ರಾಣಸಖಾ ತ್ರಿಭುವನಪ್ರತಿಪಾಲಕ।
ಜೀವನಕೇ ಅವಲಂಬನಹೇ॥ ಹೇ ಜಗತ್ರಾತಾ

ವಿಶ್ವದೊಡೆಯಾ ದುರಿತಗಳನು। ದೂರಹೋಗಲಾಡಿಸೈ।
ಅವುಪೆಮ್ಮ ಶಿವಕೆ ತಂದೆ। ಅದನು ಬೇಗ ಕರುಣಿಸೈ।
ಜ್ಞಾನದೀಪಜ್ಯೋತ್ತಿನೆಮಗೆ। ವೀರ್ಯವದಯಪಾಲಿಸೈ।
ಆತ್ಮಶಿವಕೆ ನಿನ್ನಬಯಕೆ। ಗೆಮ್ಮಬಾಳಹೊಂದಿಸೈ॥

ವಕ್ರತುಂಡಮಹಾಕಾಯ ಸೂರ್ಯಕೋಟೀ ಸಮಪ್ರಭ।
ನಿರ್ವಿಘ್ನಂ ಕುರುಮೇದೇವ ಸರ್ವಕಾರ್ಯೇಷು ಸರ್ವದಾ॥
ಗುರುಬ್ರಹ್ಮ ಗುರುರ್ವಿಷ್ಣುಃ ಗುರುರ್ದೇವಃ ಮಹೇಶ್ವರಃ
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀಗುರವೇನಮಃ

ರಾಗ:- **ಕೇದಾರ** ತಾಳ:- **ತ್ರಿಪಟಿ**

( ಸಾಬರಮತಿ "ಆಶ್ರಮ ಭಜನಾವಲಿ"ಯ ಕೃಪೆಯಿಂದ )

ರಾಮಕಹೋ ರಹಮಾನಕಹೊ ಕೊವು, ಕಾನ್ಹ ಕಹೊಮಹಾದೇವರೀ
ಪಾರಸನಾಥಕಹೊ ಕೋವು ಬ್ರಹ್ಮ, ಸಕಲಬ್ರಹ್ಮಸ್ವಯಮೇವರಿ ॥ಪ॥

ಭಾಜನಭೇದ ಕಹಾವತನಾನಾ, ಏಕ ಮೃತ್ತಿಕಾ ರೂಪರೀ
ತೈಸೆ ಖಂಡ ಕಲ್ಪನಾರೋಪಿತ, ಆಪ ಅಖಂಡಸರೂಪರಿ ॥೨॥

ನಿಜಪದರಮೆ ರಾಮ ಸೋ ಕಹಿಯೆ, ರಹಿಮಕರೆ ರಹಿಮಾನರೀ
ಕರ್ಷೆ ಕರಮ ಕಾನ್ಹ ಸೋ ಕಹಿಯೆ, ಮಹಾದೇವ ನಿರ್ವಾಣರಿ ॥೩॥

ಪರಸೆ ರೂಪಪಾರಸ ಸೋ ಕಹಿಯೆ, ಬ್ರಹ್ಮ ಚಿನ್ಹೆ ಸೊ ಬ್ರಹ್ಮರೀ
ಇಹವಿಧಿ ಸಾಧೋ ಆಪ **ಆನಂದಘನ,** ಚೇತನಮಯ ನಿಕರ್ಮರೀ ॥೪॥

# ಪಂಚಾಂಗ ಪರಿಚಯ

## ಕಾಲಮಾನ

| | | | | |
|---|---|---|---|---|
| ಶಕೆ | .... | .... | .... | .... |
| ಸಂವತ್ಸರ | .... | .... | .... | .... |
| ಅಯನ | .... | .... | .... | .... |
| ಋತು | .... | .... | .... | .... |
| ಮಾಸ | .... | .... | .... | .... |
| ಪಕ್ಷ | .... | .... | .... | .... |
| ತಿಥಿ | .... | .... | .... | ... |
| ನಕ್ಷತ್ರ | .... | .... | .... | .... |
| ವಾರ | .... | .... | .... | .... |
| ಮಳೆಯ ನಕ್ಷತ್ರ | .... | .... | .... | .... |
| ದಿನಾಂಕ | .... | .... | .... | .... |

— ವರ್ತಮಾನಪತ್ರದ ಸಂಕ್ಷಿಪ್ತ ಸಮಾಚಾರ —

ಸಹಿ........

# "ದಾಮೋದರ" ಕ್ಯಾಲೆಂಡರ

## ೧೯೫೩ ರಿಂದ ೧೯೫೭ರ ವರೆಗೆ

### [ ತಿಳಿದುಕೊಳ್ಳುವ ಬಗೆ ]

( ಕೆಳಗಿಸ ಚೌಕದಲ್ಲಿ ಮೇಲುಗಡೆ ಒಂದೊಂದು ವರ್ಷಕ್ಕೆ ಒಂದೊಂದು ಗುರುತಕ್ಷರ ವಿದೆ. ದಾ= ೧೯೫೩. ಮೊ= ೧೯೫೪. ೀ= ೧೯೫೫. ದ= ೧೯೫೬. ರ= ೧೯೫೭. ನಿಮಗೆ ಯಾವ ವರ್ಷದ ಯಾವ ತಿಂಗಳು ಬೇಕೋ ಆ ತಿಂಗಳಿನ ಎದುರಿಗೆ ಆ ವರುಷದ ಗುರುತಕ್ಷರ ಹಿಡಿಯಿರಿ. ಅದರಿಂದ ಅದೇ ಸಾಲಿನಲ್ಲಿ ನೇರವಾಗಿ ಕೆಳಕ್ಕೆ ಇಳಿಯಿರಿ. ಆಗ ಕೆಳಭಾಗದ ಬಲಗಡೆ ಚೌಕದಲ್ಲಿರುವ ತಾರೀಖಿಗೆ ಎದುರಾಗಿ ವಾರದ ಹೆಸರು ಸಿಗುವದು. )

| | | | | | | | |
|---|---|---|---|---|---|---|---|
| ಮೇ | ೀ | ಮೊ | ದಾ | | ರ | ದ | |
| ಆಗಸ್ಟ | ಮೊ | ದಾ | | ರ | ದ | | ೀ |
| ಫೆಬ್ರುವರಿ ಮಾರ್ಚ್ಚ ನವಂಬರ | ದಾ | | ರ | ದ | | ೀ | ಮೊ |
| ಜೂನ | | ರ | ದ | | ೀ | ಮೊ | ದಾ |
| ಸಪ್ಟಂಬರ ಡಿಸೆಂಬರ | ರ | ದ | | ೀ | ಮೊ | ದಾ | |
| ಜುಲಾಯಿ ಎಪ್ರಿಲ್ | ದ | | ೀ | ಮೊ | ದಾ | | ರ |
| ಜನೆವರಿ ಅಕ್ಟೋಬರ | | ೀ | ಮೊ | ದಾ | | ರ | ದ |

| | | | | | | | | | | | |
|---|---|---|---|---|---|---|---|---|---|---|---|
| ೧ | ೮ | ೧೫ | ೨೨ | ೨೯ | ರ | ಶ | ಶು | ಗು | ಬು | ಮಂ | ಚಂ |
| ೨ | ೯ | ೧೬ | ೨೩ | ೩೦ | ಚಂ | ರ | ಶ | ಶು | ಗು | ಬು | ಮಂ |
| ೩ | ೧೦ | ೧೭ | ೨೪ | ೩೧ | ಮಂ | ಚಂ | ರ | ಶ | ಶು | ಗು | ಬು |
| ೪ | ೧೧ | ೧೮ | ೨೫ | | ಬು | ಮಂ | ಚಂ | ರ | ಶ | ಶು | ಗು |
| ೫ | ೧೨ | ೧೯ | ೨೬ | | ಗು | ಬು | ಮಂ | ಚಂ | ರ | ಶ | ಶು |
| ೬ | ೧೩ | ೨೦ | ೨೭ | | ಶು | ಗು | ಬು | ಮಂ | ಚಂ | ರ | ಶ |
| ೭ | ೧೪ | ೨೧ | ೨೮ | | ಶ | ಶು | ಗು | ಬು | ಮಂ | ಚಂ | ರ |

ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ.

—ಶಿಕ್ಷಣತತ್ವ

ಸ್ವಾವಲಂಬಿಯಾಗಲಿಕ್ಕೆ, ಸಾಂಘಿಕ ಜೀವನದ ಅಭ್ಯಾಸವಾ:

—ಗ್ರಂ

ಹೊಸಶಿಕ್ಷಣದ ದಾರಿಯೇ ರಾಷ್ಟ್ರದ ಏಳ್ಗೆಯ ಹೆದ್ದಾರಿ.

—ಗ್ರಂ

ವಸ್ತ್ರ ಸ್ವಾವಲಂಬಿಯಾಗು.

—ಗ್ರಂ

ಸಮಸ್ತ ಸಾಕ್ಷರತೆಯಾದಾಗಲೇ ಮಾದರಿಯ
ರಾಷ್ಟ್ರವೆಂಬುದನ್ನು ಮರೆಯಬೇಡ.

—ಗ್ರಂ

ಪ್ರತಿಯೊಬ್ಬನೂ ತಾನು ಕೈಕೊಂಡ ವೃತ್ತಿಯ ಬಗ್ಗೆ
ಅಭಿಮಾನಿಯಾಗಿರಬೇಕು.

—ಗ್ರಂ

ಹೇಪ್ರಭೋ ಆನಂದದಾತಾ! ಜ್ಞಾನಹಮ್ಕೋ ದೀಜಿಯೇ!
ಲೀಜಿಯೇ ಹಮ್ಕೋ ಶರಣ್ಮೇ! ಹಮ್ ಸದಾಚಾರೀ ಬನೆ.

—ಪ್ರಾರ್ಥನಾ

ಭಕ್ತಂಗೆ ಬಡತನ ಉಂಟೆ? ನಿತ್ಯರಿಗೆ ಮರಣ ಉಂಟೆ? ಭಕ್ತರು
ಬಡವರೆಂದು ಮತ್ತೊಂದ ಕೊಟ್ಟಿಹನೆಂದರೆ ಮಾರಯ್ಯಪ್ರಿಯ
ಅಮಳೇಶ್ವರಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ.

—ಆಯ್ದಕ್ಕಿ ಲಕ್ಕಮ್ಮಾ

ಮದ್ಯಪಾನವ ಮಾಡಿ ಇದ್ದುದೆಲ್ಲವ ನೀಡಿ,
ಬಿದ್ದು ಬರುವವನ ಸದ್ದಡಗಿ ಸಂತಾನ ಹೋಗುವದು.

—ಸರ್ವಜ್ಞ

ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಎಲೆ ಅಯ್ಯ? ರೋಷವೆಂಬುದು ಯಮದೂತರಿಗೆ ಅಲ್ಲದೆ ಅಜಾತರಿಗುಂಟೆ ಎಲೆ ಅಯ್ಯ? ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ ಮಾರಯ್ಯಪ್ರಿಯ ಅಮಳೇಶ್ವರಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ

—ಆ. ಲಕ್ಕಮ್ಮ

ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತರಿಗೆ ಎತ್ತನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ.

—ಆ. ಲಕ್ಕಮ್ಮ

ಸತ್ಯವೇ ನಮ್ಮ ತಾಯಿ ತಂದೆ! ಸತ್ಯವೇ ನಮ್ಮ ಬಂಧುಬಳಗ!
ಸತ್ಯಕ್ಕೆ ತಪ್ಪಿನಡೆದರೆ, ಮೆಚ್ಚನಾ ಜಗದೀಶನು.

—ಗೋವಿನಕಥೆ

ತಾನು ಮಾಡುವ ಸೇವೆಯಿಂದ ಘನತೆ ಲಭಿಸುವದೇ ಹೊರತು ತಾನಿರುವ ಸ್ಥಾನಮಾನಗಳಿಂದ ಘನತೆ ಲಭಿಸದು.

—ಗಾಂಧಿ

ಹುಟ್ಟುವಾಗಲೂ ಸರಿಸಮಾನತೆ,
ಸಾಯುವಾಗಲೂ ಸರಿಸಮಾನತೆ, ಮಧ್ಯದಲ್ಲೇಕೆ ಈ ಅಸಮತೆ.

—ನೀತಿ

ಐಕ್ಯತೆಯಿಂದ ಬಾಳುತ್ತೇವೆ, ವಿಭಜನೆಯಿಂದ ಬೀಳುತ್ತೇವೆ.

—ಗ್ರಾಂ

ತನ್ನಿಚ್ಛೆ ನುಡಿದರೆ ಮೆಚ್ಚುವದೀಮನವು
ಇದರಿಚ್ಛೆ ನುಡಿದರೆ ಮೆಚ್ಚದೀಮನವು.

—ಸುಭಾಷಿತ

ದೈವೇಚ್ಛೆಯಿಂದ ವಿಷವು ಅಮೃತವಾಗುತ್ತದೆ,
ಅಮೃತವು ವಿಷವಾಗುತ್ತದೆ.

—ಸುಭಾಷಿತ

ಪ್ರಾರ್ಥನೆಯ ಪ್ರತಿಮಾತಿನಲ್ಲೂ ಅಂತರಾತ್ಮನ ಕೂಗು ಇದ್ದರೆ
ಖಂಡಿತವಾಗಿಯೂ ಭಗವಂತನು ಓಗೊಡುವನು.

—ಗಾಂಧಿ

ಯಾವನು ಶಾಶ್ವತವಾದುದನ್ನು ಬಿಟ್ಟು ನಶ್ವರವಾದುದನ್ನು
ಅವಲಂಬಿಸುವನೋ ಅವನು ಎರಡನ್ನೂ ಕಳೆದುಕೊಳ್ಳುವನು.

—ಭಗವದ್ಗೀತೆ

ಹಾವತಿಂದವರ ನುಡಿಸಬಹುದು,
ಗ್ರಹ ಹೊಡೆದವರ ನುಡಿಸಬಹುದು,
ಸಿರಿಹೊದ್ದವರ ನುಡಿಸಬಾರದು,
ನೋಡಯ್ಯ ಕೂಡಲಸಂಗಮದೇವ.

—ಮ. ಬಸವೇಶ್ವರ

ಎನ್ನ ನಡೆಯೊಂದುಪರಿ, ಎನ್ನ ನುಡಿಯೊಂದುಪರಿ,
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯ,
ನುಡಿಗೆ ತಕ್ಕ ನಡೆಯ ಕಂಡೊಡೆ
ಕೂಡಲ ಸಂಗಮ ದೇವನೊಳಗಿರ್ದನಯ್ಯ.

—ಮ. ಬಸವೇಶ್ವರ

ಕಂಡಭಕ್ತರಿಗೆ ಕೈಮುಗಿಯುವಾತನೇ ಭಕ್ತ ।
ಮೃದುವಚನವೇ ಸಕಲ ಜಪಂಗಳಯ್ಯ ।
ಮೃದುವಚನವೇ ಸಕಲ ತಪಂಗಳಯ್ಯ ।
ಸದುವಿನಯವೇ ಸದಾಶಿವನೊಲುಮೆಯಯ್ಯ ।
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ ॥

—ಮ. ಬಸವೇಶ್ವರ

ನೂರನೋದಿ ನೂರ ಕೇಳಿದರೇನು?
ಆಸೆ ಹರಿಯದು, ರೋಷ ಬಿಡದು,
ಮಜ್ಜನಕ್ಕೆರೆದು ಫಲವೇನು?
ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ
ನಗುವ ನಮ್ಮ ಕೂಡಲಸಂಗಮದೇವ ॥

—ಮ. ಬಸವೇಶ್ವರ

ಗೊತ್ತಿಲ್ಲದ್ದನ್ನು ಕೇಳಿ ತಿಳಿದುಕೊಳ್ಳಲಿಕ್ಕೆ ನಾಚಬೇಡ.

—ಗಾಂಧೀಜಿ

ಮನುಷ್ಯನು ಬೆಲ್ಲದ ಕರಣಿಯಂತಿರಬೇಕು.

—ಗ್ಯಂ

ಪ್ರಯತ್ನಕ್ಕೆ ಪರಮಾತ್ಮನು ಸಹಾಯಕನು.

—ಗ್ಯಂ

ಕೋಳಿ ಕೂಗದ ಮುನ್ನ ಏಳುವದು ನಿತ್ಯ, ದಯಾಳು ದೇವರನು
ಭಕ್ತಿಯಿಂ ನೆನೆದರೆ ಆಳಿನಾಳಯ್ಯ ಸರ್ವಜ್ಞ.

—ಸರ್ವಜ್ಞ

ನಾಲಿಗೆ ಒಳ್ಳೆಯದಾದರೆ ನಾಡೆಲ್ಲ ಒಳ್ಳೆಯದು.

—ನೀತಿ

ಸಹಕಾರದಿಂದ ಎಂಥ ಕಠಿಣವಾದ ಕೆಲಸವೂ ಸಫಲವಾಗುತ್ತದೆ.

-ಗ್ಯಂ

ತುಚ್ಛಗೆ ನೀಚಗೆ ಧನವತಿ।
ಹೆಚ್ಚಿದೊಡೇನಾತ್ಮಭೋಗಪರಹಿತಕಿಲ್ಲಂ।
ಬಚ್ಚಲನೀರ್ ಕದಡಿದೊಡೇಂ।
ನಿಚ್ಚಳದಿಂ ತಿಳಿದೊಡೇನು ಚೂಡಾರತ್ನ.

ಜಾತಿ ಜಾತಿಗೆ ವೈರ। ನೀತಿ ಮೂರ್ಖಗೆ ವೈರ।
ಪಾತಕವು ವೈರ ಸುಜನರಿಗೆ। ಅರಿದವರಿಗೇತರ ವೈರ ಸರ್ವಜ್ಞ॥

ಪರಪೀಡೆಯೇ ಪಾಪ! ಪರೋಪಕಾರವೇ ಪುಣ್ಯ.

—ಮ. ಬಸವೇಶ್ವರ

ನಾವು ಮಾಡಿದ ತಪ್ಪುಗಳನ್ನು ಅರಿತುಕೊಂಡು
ಅವುಗಳನ್ನು ತಿದ್ದುವುದೇ ಎಲ್ಲಕ್ಕಿಂತ ಹೆಚ್ಚಿನ ಜಾಣತನವೆನಿಸ..

—ಅಂಗ್ಲ ಗಾದೆ

ಸ್ಥಾನಮಾನವರಿತು ಸಾವಧಾನದಿಂದ ಗೆಳೆತನ ಮಾಡು.

—ಸುಭಾಷಿತ

ನುಡಿದರೆ ಮುತ್ತಿನ ಹಾರದಂತಿರಬೇಕು,
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು,
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು,
ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು,
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವ
ನೆಂತೊಲಿಯುವನಯ್ಯ.

—ಮ. ಬಸವೇಶ್ವರ

ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ,
ದಯವೇ ಧರ್ಮದ ಮೂಲವಯ್ಯಾ.
ಕೂಡಲಸಂಗಯ್ಯ ನಂತಲ್ಲದೊಲ್ಲನಯ್ಯಾ.

-ಮ. ಬಸವೇಶ್ವರ

ಸಾಹಿತ್ಯ, ಸಂಗೀತ, ಕಲೆಗಳಿಲ್ಲದ ಮಾನವ
ಕೋಡುಗಳಿಲ್ಲದ ಪಶುವಿದ್ದಂತೆ.

-ಸುಭಾಷಿತ

ಕೊಲುವವನೇಮಾದಿಗ, ಹೊಲಸುತಿಂಬುವವನೇ ಹೊಲೆಯ!
ಕುಲವೇನೋ, ಅವಂದಿರಕುಲವೇನೋ?
ಸಕಲಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು.

—ಮ. ಬಸವೇಶ್ವರ

ಜಗತ್ತಿನಲ್ಲಿ ನನಗೆ ಯಾರ ಭಯವೂ ಇಲ್ಲ.
ದೇವನೊಬ್ಬನಿಗೆ ಮಾತ್ರ ಅಂಜುತ್ತೇನೆ.
ಯಾರನ್ನೂ ದ್ವೇಷಿಸೆನು.
ಅನ್ಯಾಯಕ್ಕೆ ಎಂದಿಗೂ ತಲೆಬಾಗೆನು.
ಸತ್ಯದಿಂದ ಅಸತ್ಯವನ್ನು ಜಯಿಸುತ್ತೇನೆ.
ಅಸತ್ಯ ಬೇರುಸಹಿತ ಕಿತ್ತೊಗೆಯಲು ಹೋರಾಡುವಾಗ ಎಲ್ಲ
ಬವಣೆಯನ್ನು ಸಹಿಸುತ್ತೇನೆ.

—ಗಾಂಧೀಸೂತ್ರದಿಂದ

ನಿನ್ನ ಬಾಂದಳದಂತೆ ನನ್ನ ಮನವಿರಲಿ
ನಿನ್ನ ಸಾಗರದಂತೆ ನನ್ನ ಎದೆಯಿರಲಿ.

—ಕುವೆಂಪು

ಅಪ್ಪನು ನಮ್ಮ ಮಾದರಚೆನ್ನಯ್ಯ,
ಬೊಪ್ಪನು ನಮ್ಮ ಡೋಹರಕಕ್ಕಯ್ಯ,
ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ,
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ,
ಎನ್ನನೇತಕ್ಕರಿಯಿರಿ ಕೂಡಲಸಂಗಯ್ಯ?

—ಮ. ಬಸವೇಶ್ವರ

ತಪ್ಪುಗಳಲ್ಲಿ ದೊಡ್ಡತಪ್ಪೆಂದರೆ ಯಾರೊಬ್ಬರದೂ
ಅರಿವಿಲ್ಲದಿರುವದು.

—ಮ. ಬಸವೇಶ್ವರ

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ,
ಒಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿನೋಡ!
ಕೂಡಲಸಂಗಮದೇವನಲ್ಲದೆ ಇಲ್ಲವೆಂದಿತ್ತುವೇದ.

—ಮ. ಬಸವೇಶ್ವರ

ಕೆರೆ ಹಳ್ಳ ಬಾವಿಗಳು ಮೈದೆಗೆದರೆ
ಗೊಳ್ಳೆ ಗೊರಜೆ ಚಿಪ್ಪುಗಳು ಕಾಣಬಹುದು;
ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು!
ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ
ಲಿಂಗವೇ ಕಾಣಬಹುದು.

—ಮ. ಬಸವೇಶ್ವರ

ಲಾಭದಾಸೆಯೇ ಪಾಪಕೂಪದ ಸೋಪಾನ.

—ಗಾದೆ

ಅಪರಾಧಗಳನ್ನು ಮರೆ, ಆದರೆ ಉಪಕಾರಗಳನ್ನು ಮರೆಯಬೇಡ.

—ಗಾಂಧಿ

ಮಾತೃ ದೇವೋ ಭವ.

—ಮಹಾಭಾರತ

ಅಸೂಯೆಯು ಅಶಕ್ತತೆಯ ದ್ಯೋತಕವು.

—ಸುಭಾಷಿತ

ಮೊದಲೇ ಮರ್ಕಟ ಮೇಲೆ ಮದ್ಯದ ಮದ
ಮಿದುಳು ಹಿಡಿದಿರಲು ವೃಶ್ಚಿಕ,
ತುದಿಯಕಾಲನು ಕಚ್ಚಿದರೆ ಕುಣಿದಾಡುವಂದದಲಿ,
ಅಧಿಕ ಧನ ಸಂಪತ್ತು ಯೌವನ,
ಮೊದಗಿರಲು ವನಿತಾದಿ ವಿಷಯಾ
ಸ್ಪದ ನೆನೆಸಿ ನಿಜವರಿಯದವನಿಗೆ ಮೋಕ್ಷವೆಲ್ಲಿಂದ||

—ಅನುಭವ

ಇಂದಿನ ಶಿಕ್ಷಣವೇ ನಾಳಿನ ಜನಾಂಗಕ್ಕೆ ಕೂಡಿಡುವ ಬಂಡವಾಳ.

—ಗ್ನಾಂ

ಬಿಸಲೊಳಗೆ ಬಿದ್ದ ಮೊಸಳೆಯು|
ನಸುವಳಿಯದ ಹಾಗೆ ನೀರೊಳು ತಂದುಬಿಡಲಾ||
ಮೊಸಳೆ ಮರುಳನನ ನುಂಗಿತು.
ಪಿಸುಣಂಗುಪಕಾರ ಮಾಡೆ ತಪ್ಪದು ಕೇಡು||

ನುಣ್ದಲೆಗರೂರಲ್ಲಿ ಹೂಕೊಂಬರಾರುಂಟು?
ಮಂದಾತ್ಮರಿರುವ ಕಡೆ ಶಾಸ್ತ್ರಹೇಳಿದರೆ ಕೊಂದಾರು ನಿನ್ನ ಸರ್ವಜ್ಞ

—ಸರ್ವಜ್ಞ

ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ
ಧನವಗಳಿಸಿ ದಾಸೋಹವಮಾಡಿ ಭಕ್ತರಾದೆವೆಂಬವರ
ಮುಖವ ತೋರದಿರಯ್ಯಾ ಎನಗೆ, ಅವನಲ್ಲಿಯೇ ಧನತೋರ.
ಅವ ಪಾಪಿ ಕೋಪಿ ಪರಿಭ್ರಷ್ಟ. ಅವನ ಕಾಯಕವ ವಿಚಾರಿಸದೆ
ಅವನ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆ ಮಾಡುವ
ಜಂಗಮಕ್ಕೆ ಏಳನೆಯ ಪಾತಕ ಇಂತಪ್ಪಗುರುಶಿಷ್ಯ ಜಂಗಮರ
ಬಾಳುವೆ ಹುಲಿಕಪಿಲೆಯ ತಿಂದು ಮಿಕ್ಕದ ನರಿ ತಿಂದಂತಾಯಿತು
ಕಾಣಾ ಕೂಡಲ ಚನ್ನಸಂಗಮದೇವಾ.

-ಮ. ಬಸವೇಶ್ವರ

ಶಿವನೇ ದೈವ ಕೊಲ್ಲದಿರ್ಪುದೇ ಧರ್ಮ. ಅಧರ್ಮದಿಂದ
ಬಂದುದ ಒಲ್ಲದಿಪ್ಪುದೇ ನೇಮ. ಇದು ಸತ್ಯ ಶಿವಬಲ್ಲ ಶಿವನಾಣೆ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

ಮಹಾತ್ಮಾ ಗಾಂಧೀಜಿಯವರ ಅಂಧಾನುಕರಣಿ
ಎನ್ನಿಸಿಕೊಳ್ಳುವದರಲ್ಲಿ ನನಗೆ ಆನಂದವಿದೆ ಹೆಮ್ಮೆಇದೆ.

—ಸರದಾರ ಪಟೀಲ

ಆನು ಮಾಡಿಹ ತಪ್ಪನೆಣಿಸಿಹನೆಂದರೆ ಗಣನೆಯಿಲ್ಲ
ಆಡಿತಪ್ಪುವೆ, ಮಾಡಿತಪ್ಪುವೆ, ನೋಡಿತಪ್ಪುವೆ, ಕೂಡಿತಪ್ಪುವೆ,
ಎನ್ನತಪ್ಪನೊಪ್ಪಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು
ಕೂಡಲಸಂಗಮದೇವಾ.

—ಮ. ಬಸವೇಶ್ವರ

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ ಅನ್ನಕ್ಕೆ ಮೇಲು ಇನ್ನಿಲ್ಲ
ಲೋಕಕ್ಕೆ ಅನ್ನವೇ ಮೇಲು ಸರ್ವಜ್ಞ.

—ಸರ್ವಜ್ಞ

ಆದೇವ ಈದೇವ ಮಹಾದೇವನೆನಬೇಡ ಆದೇವ ದೇವ
ತ್ರಿಭುವನ ಪ್ರಾಣಿಗಳಿಗಾದವನೇ ಸರ್ವಜ್ಞ.

ಒಳ್ಳೆಯವನಿರದೂರು ಕಳ್ಳನಾ ಸಂಗವು ಸುಳ್ಳನಾ ಮಾತು
ಇವು ಮೂರು ಕೆಸರೊಳಿಹ ಮುಳ್ಳುತುಳಿದಂತೆ ಸರ್ವಜ್ಞ.

—ಸರ್ವಜ್ಞ

ಮೂರ್ಖರ ಸಂತೆಯಲ್ಲಿ ಜಾಣನೆನಿಸಲೆಳಿಸುವನೇ ಎಲ್ಲಕ್ಕೂ
ಹೆಚ್ಚಿನ ಮೂರ್ಖನೆನಿಸುವನು.

—ಗ್ಯಾಂ

ಹುಟ್ಟುವ ಮೊದಲು ಅವ್ಯಕ್ತತೆ, ಮರಣದ ನಂತರ ಅವ್ಯಕ್ತತೆ
ಅದಕ್ಕೆ ಶೋಕವೇಕೆ.

—ಸುಭಾಷಿತ

ದೀಪದೆಡೆ ಮುತ್ತುವ ಪತಂಗಗಳಂತೆ ನೆರೆಯುವರು
ಆಪ್ತೇಷ್ಟರು ಹಣವಿದ್ದಡೆ, ಸರಿಯುವರು ವೈಲಾಚಿಗೆ ಕೈಗೆ
ಭಿಕ್ಷಾಪಾತ್ರೆ ಬಂದೆಡೆ.

—ಸತ್ಯದರ್ಶನ

ಅಂಜುಬುರುಕರು ಮರಣ ಪೂರ್ವದಲ್ಲಿ ಅನೇಕ ಸಲ ಸಾಯುತ್ತಾರೆ.

—ಶೇಕ್ಸ ಪಿಯರ

ಇತರರಲ್ಲಿ ಉತ್ಸಾಹೋದ್ರೇಕವನ್ನುಂಟುಮಾಡುವ ಕಸುವು
ಸದಾಚಾರ ಸಚ್ಛೀಲಗಳಲ್ಲಿದೆ.

—ಸ್ಮಾಯಿಲ್ಸ

ದೇವನೊಬ್ಬ ನಾಮ ಹಲವು.

—ಗ್ರಂ

ದಯವಿಲ್ಲದ ಧರ್ಮವಾವುದಯ್ಯ.

—ಮ. ಬಸವೇಶ್ವರ

ಯಾರು ತಾವೇ ಜಾಣರೆಂದು ತಿಳಿದುಕೊಳ್ಳುವರೋ
ಅವರಂಥ ಮಹಾಮೂರ್ಖರು ಯಾರೂ ಇಲ್ಲ.

—ಸುಭಾಷಿತ

ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ.

—ಮ. ಬಸವೇಶ್ವರ

ಗುರಿ ಮುಟ್ಟುವವರೆಗೆ ನಿಲ್ಲಬೇಡ.

— ಉಪನಿಷತ್

ಸ್ವಗೃಹೇ ಪೂಜ್ಯತೇ ಮೂರ್ಖಃ। ಸ್ವಗ್ರಾಮೇ ಪೂಜ್ಯತೆ ಪ್ರಭುಃ॥
ಸ್ವದೇಶೇ ಪೂಜ್ಯತೇ ರಾಜಾ। ವಿದ್ವಾನ್ ಸರ್ವತ್ರ ಪೂಜ್ಯತೆ ॥೧॥

—ಸುಭಾಷಿತ

ಗುರು ಹಿರಿಯರ ಮಾನ ಕಾಯಬೇಕು.

—ಗಾದೆ

ಒಬ್ಬರ ಮನವನೋಯಿಸಿ ಒಬ್ಬರ ಮನೆಯ ಘಾತವ ಮಾಡಿ
ಗಂಗೆಯ ಮುಳುಗಿದರೆ ಆಗುವದೇನಯ್ಯ, ಚಂದ್ರನು ಗಂಗೆಯ
ತಡೆಯಲ್ಲಿದ್ದರೇನು? ಕಳಂಕ ಬಿಡದಾಯಿತ್ತು. ಇದು ಕಾರಣ
ಒಬ್ಬರ ಮನೆಯ ಘಾತವ ಮಾಡದವನೇ ಪರಮಪಾವನನು
ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ನೊಂದ ನೋವ ನೋಯದವನೆತ್ತಬಲ್ಲ.

—ಮ. ಬಸವೇಶ್ವರ

ಮನವರಿತು ಮಾತಾಡು, ಗುಣವರಿತು ಗೆಳೆತನ ಮಾಡು.

—ಗ್ಯಂ

ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ, ಬೇಡು ಬೇಡೆಲೆಹಂದೇ!
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ,
ಕೂಡಲ ಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ
ನಿಮ್ಮ ಪುರಾತರ ಮನೆಯಲ್ಲಿ.

—ಮ. ಬಸವೇಶ್ವರ

ನಿಃಸ್ವಾರ್ಥವು ಲಾಭದಾಯಕವಾದುದು; ಆದರೆ ಅದನ್ನು ಆಚರಿಸಿ
ತೋರಿಸುವ ತಾಳ್ಮೆಯು ಜನರಲ್ಲಿ ಬೇಕು.

—ವಿವೇಕಾನಂದ

ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ,
ಲೋಕ ವಿರೋಧಿ ಶರಣನಾರಿಗಂಜುವನಲ್ಲ,
ಕೂಡಲ ಸಂಗಮದೇವರ ರಾಜತೇಜದಲ್ಲಪ್ಪನಾಗಿ.

—ಮ. ಬಸವೇಶ್ವರ

ಧೈರ್ಯಂ ಸರ್ವತ್ರ ಸಾಧನಂ.

—ಗಾದೆ

ಧರ್ಮದ ಹೆಸರಿನಲ್ಲಿ ಬಂಧುಗಳ ಸೆಣಸೆಂದು ಹೇಳುವಿ,
ಹೊಲೆ ಜನಕೆ ಧರ್ಮವೇ ಎಂಬುದಿಲ್ಲ.

—ಜ. ಎಂ. ಅಕಬರಅಲಿ

ಅನ್ಯರಿಂದ ಮರ್ಯಾದೆಯನ್ನು ನಾವಾಗಿ ಅಪೇಕ್ಷಿಸಬಾರದು;
ಅರ್ಹತೆಯಿದ್ದರೆ ಅಯಾಚಿತವಾಗಿ ಬರುವದು.

—ವಿವೇಕಾನಂದ

ನೀನು ಒಳ್ಳೆಯವನಿದ್ದರೆ ಎಲ್ಲರೂ ನಿನ್ನನ್ನು ಒಳ್ಳೆಯತನದಿಂದ ಕಾಣುವರು.

—ಗ್ಯಾಂ

ಎಲ್ಲವೂ ದೇವರನ್ನೇ ಅವಲಂಬಿಸಿರುವಂತೆ ಪ್ರಾರ್ಥಿಸು.
ಎಲ್ಲವೂ ಮಾನವನನ್ನೇ ಅವಲಂಬಿಸಿರುವಂತೆ ಕಾರ್ಯಪ್ರವೃತ್ತನಾಗು.

—ಕಾರ್ಡಿನಲ್ ಸ್ಪೇಲ್‌ಮನ್

ಹಿಂದಿನದು ಆಗಿಹೋಗಿದೆ; ಮುಂದಿನದು ಅನಿಶ್ಚಿತವಿದೆ;
ಕಾರಣ ಸದ್ಯದ ಬಗ್ಗೆ ವಿಚಾರಿಸು.

—ಸುಭಾಷಿತ

ದೇಶಸೇವೆಯೇ ಈಶಸೇವೆ.

—ಗಾದೆ

ಏನಿದ್ದೊಡೇನು ನಿಜಬೋಧೆಯೊಂದಿಲ್ಲದೊಡೆ
ಕಾನನದ ಬೆಳದಿಂಗಳಂತೆ ನಿಷ್ಫಲವು.

—ಅನುಭವಾಮೃತ

ಮುತ್ತಿಗಿಂತ ಹೊತ್ತು ಉತ್ತಮ.

ಮುಂದೆ ನೀವು ಮಕ್ಕಳಿಂದ ವಂದಿತರಾಗಬೇಕಾದರೆ
ಇಂದು ನಿಮ್ಮ ತಂದೆ ತಾಯಿಗಳನ್ನು ರಕ್ಷಿಸಿರಿ.

—ಗ್ಯಾಂ

ಅಸಮಾನರೊಡನಾಟವು ಅಂತ್ಯಕ್ಕೆ ದುಃಖದಲ್ಲಿ ಕೊನೆಗೊಳ್ಳುವದು.

—ಗೋಥೆ

ಚಿಕ್ಕಂದಿನಲ್ಲಿಯೇ ವಿದ್ಯೆಯನ್ನು ಗಳಿಸಿಕೋ.

—ಗ್ಯಾಂ

ವಿದ್ಯಾ ವಿಹೀನಃ ಪಶುಃ

—ಸುಭಾಷಿತ

ಉಳ್ಳವರು ಕೊಡದಿದ್ದರೂ ಕೊಡುವವರನ್ನು ಉಳ್ಳವರನ್ನಾಗಿ ಮಾಡು ದೇವ.

—ಗ್ರಂ

ಶರೀರ ರಕ್ಷತೋ ಧರ್ಮಃ

—ಮನಸ್ಮೃತಿ

ದುಷ್ಟರಿಗೆ ಆಶ್ರಯ ಕೊಟ್ಟರೆ ಕಷ್ಟವು ಕಟ್ಟಿಟ್ಟದ್ದು.

—ಗ್ರಂ

ಮಣ ಮಾತಿಗಿಂತಲೂ ಅಣುಕೃತಿ ಮೇಲು.

—ಗಾಧೆ

ಬರಲಿರುವುದೆಲ್ಲವೂ ಬರಲಿ, ಎದುರಿಸುವ ಎದೆಯೊಂದಿರಲಿ, ಮೇಲ್ ನಿನ್ನ ಕೃಪೆಯೊಂದಿರಲಿ, ಎನಗಿನ್ನಾರ ಅಂಜಿಕೆ ದೇವಾ.

—ಗ್ರಂ

ಒಬ್ಬರು ಇನ್ನೊಬ್ಬರಿಗೆ ಮೋಸಗೊಳಿಸಲು ಪ್ರಯತ್ನಪಟ್ಟರೆ ಕೊನೆಗೆ ತಾವೇ ಮೋಸಕ್ಕೆ ಬಲಿಬಿದ್ದು ದೊಡ್ಡ ಹಾನಿಗೆ ಗುರಿಯಾಗುವರು.

ನಿನ್ನ ಕರ್ತವ್ಯಕರ್ಮವನ್ನಷ್ಟು ಮನಃಪೂರ್ವಕವಾಗಿ ಮಾಡು, ಉಳಿದದ್ದನ್ನು ದೇವರಿಗೆ ಬಿಟ್ಟುಕೊಡು.

—ಗ್ರಂ

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆಲ್ಲ ಹೊಗಳಿ ಹೊಗಳಿ!
ಎನ್ನ ಹೊಗಳತೆ ಎನ್ನ ನಿಮ್ಮೆಯ್ಗೊಂಡಿತ್ತಲ್ಲಾ!
ಆಯ್ಯಾ, ನಿಮ್ಮ ಮನ್ನಣೆಯೇ ಮಸೆದಲಗಾಗಿತಾಗಿತ್ತಲ್ಲಾ!
ಅಯ್ಯೋ! ನೊಂದೆನು, ಸೈರಿಸಲಾರೆನು;
ಕೂಡಲ ಸಂಗಮದೇವಾ, ನೀನೆನ್ನಗೊಳ್ಳಿದನಾದರೆ
ಎನ್ನ ಹೊಗಳತೆಗಡ್ಡಬಾರಾಧರ್ಮಿ.

—ಮ. ಬಸವೇಶ್ವರ

ಧರ್ಮವೇ ಜಯ, ಕರ್ಮವೇ ಲಯ.

ಕಾಯಕವೇ ಕೈಲಾಸ.

—ಮ. ಬಸವೇಶ್ವರ

ನಮ್ಮ ಮನೆ ಕತ್ತಲು.

—ಬೇಂದ್ರೆ

ಒಕ್ಕಿ ಇಲ್ಲದಿದ್ದರೆ ಮಣ್ಣು ಮುಕ್ಕು.

ಪಾಶ್ಚಾತ್ತಾಪವೇ ಪಾಪವನ್ನು ನಿವಾರಿಸಬಲ್ಲದು.

-ಗ್ರಂ

ಎನ್ನ ಕಾಯುವ ದಂಡಿಗೆಯ ಮಾಡಯ್ಯಾ,
ಎನ್ನ ಸಿರವ ಸೋರೆಯ ಮಾಡಯ್ಯಾ,
ಎನ್ನ ನರವ ತಂತಿಯ ಮಾಡಯ್ಯಾ,
ಎನ್ನ ಬೆರಳ ಕಡ್ಡಿಯ ಮಾಡಯ್ಯಾ,
ಬತ್ತೀಸ ರಾಗವ ಮಾಡಯ್ಯಾ ಉದರಲೊತ್ತಿ ಬಾರಿಸು
ಕೂಡಲ ಸಂಗಮದೇವಾ.

—ಮ. ಬಸವೇಶ್ವರ

ಪುರುಷರಿಗೆ ಸಹನೆಯೇ ಭೂಷಣ.
ಸ್ತ್ರೀಯರಿಗೆ ಲಜ್ಜೆಯೇ ಭೂಷಣ.

—ಗ್ರಂ

ಸಗ್ಗವು ಮಾನವ ಲೋಕಕ್ಕೆ ಒಲಿದಿತ್ತ ಒಂದು ವರ,
ಪ್ರಸಾದವೆಂದರೆ ಅನುಕಂಪ, ಅಥವಾ ದಯೆಯೆಂಬ ಶ್ರೇಷ್ಠ ಗುಣ
ಇದೇ ಸರ್ವಧರ್ಮದ ಮೂಲ.

—ಸುಭಾಷಿತ

ಪ್ರೇಮವಿದ್ದಲ್ಲಿ ಸತ್ಯ, ಸತ್ಯವಿದ್ದಲ್ಲಿ ಪ್ರೇಮ,
ಸತ್ಯ ಪ್ರೇಮಗಳೇ ಸತಿಪತಿಯರ ಜೀವನದ ಒಳಗುಟ್ಟು.

—ಗ್ರಂ

ನಿತ್ಯ ನಿದ್ದೆಗೆಟ್ಟರೆ ಸೋಮಾರಿತನವೂ ಉಂಟಾಗುವದು,
ಮತ್ತು ಆರೋಗ್ಯವೂ ಕೆಡುವದು.

—ಗ್ರಂ

ಕಾಲಕೆಳಗಿನ ಕಡ್ಡಿಯನ್ನು ಕೀಳಿಂದು ಕಡೆಗಣಿಸಬೇಡ.

—ನೀತಿ

ಹೆಗ್ಗಣ ಹತ್ತಿದ ಮನೆ, ಮದ್ಯದ ಚಟ ಹತ್ತಿದ ಮಾನವ,
ಗೆದ್ದಲಿ ಹತ್ತಿದ ಕಟ್ಟಿಗೆ, ಇವು ಕ್ಷಣಕ್ಷಣಕ್ಕೆ ನಾಶಹೊಂದುತ್ತವೆ.

—ಗ್ರಂ

ಚಿಂತಾಯಾಶ್ಚ ಚಿತಾಯಾಶ್ಚ ಬಿಂದುಮಾತ್ರಂ ವಿಶಿಷ್ಯತೆ,
ಚಿತಾದಹತಿ ನಿರ್ಜೀವಂ ಚಿಂತಾದಹತಿ ಜೀವಿತಂ.

—ಸುಭಾಷಿತ

ಸರ್ವಜ್ಞನೆಂಬುವನು ಗರ್ವದಿಂದಾದವನೇ?
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ
ಪರ್ವತವೇ ಆದ ಸರ್ವಜ್ಞ.

—ಸರ್ವಜ್ಞ

ಬಾಳೆಗೊಂದೇ ಫಲ, ಬಾಳುಳ್ಳವರಿಗೆ ಒಂದೇ ಮಾತು.

—ಗಾದೆ

ಹಲವು ಕಾಲ ದಾವತಿಗೊಂಡು ಒಟ್ಟಿರ್ದ
ಪಿದಿರೆಯೊಂದು ಮಿಡಿಕಿಡಿಯಲ್ಲಿ ಜೀವೆಂತೆ
ಸತಿಸ್ಸನ್ನಿಹಿತನಾಗಿಪ್ಪ ಶರಣ ಭಕ್ತಿ ಒಂದು ನಾಯತನದಿಂದ
ಕೆಡುವರು; ಸ್ವಧರ್ಮದಲ್ಲಿ ಗಳಿಸಿದ ಪಿತನಧನವ ಅಧರ್ಮದಲಿ
ಕೆಡಿಸುವ ಸುತನಂತೆ ಶಿವನ ಸೊಮ್ಮು ಶಿವಂಗೆ ಮಾಡದೆ,
ಅನ್ಯಕ್ಕೆ ಮಾಡಿದರೆ ತನ್ನ ಭಕ್ತಿ ತನ್ನ ಕೆಡಿಸುವದು
ಕೂಡಲ ಸಂಗಮದೇವಾ.

—ಮ. ಬಸವೇಶ್ವರ

ಮುಂದಿನ ಸುಖಕ್ಕಾಗಿ ಇಂದು ಗಿಡನೆಡಿರಿ.

—ಗಾದೆ

ಹರಿವ ಹಾವಿಂಗಂಜೆ, ಉರಿಯ ನಾಲಿಗೆಗಂಜೆ,
ಸುರಗಿಯ ಮೊನೆಗಂಜೆ! ಒಂದಕ್ಕಂಜುವೆ, ಒಂದಕ್ಕಳುಕುವೆ,
ಪರಸ್ತ್ರೀ, ಪರಧನವೆಂಬೀ ಜೂಬಿಂಗಂಜುವೆ!
ಮುನ್ನಂಜದ ರಾವಣನೇ ವಿಧಿಯಾದ! ಅಂಜುವೆನಯ್ಯಾ
ಕೂಡಲಸಂಗಮದೇವಾ.

—ಮ. ಬಸವೇಶ್ವರ

ಯಾವನು ಎರಡನೇಯವರ ಒಂದು ಗೇಣು ಭೂಮಿಯನ್ನು ಕೂಡ ಬಲುವೆಯಿಂದ ಅಥವಾ ಅನ್ಯಾಯದಿಂದ ಹರಣ ಮಾಡುವನೋ ದೇವರು ಅವನನ್ನು ಪ್ರಳಯ ಕಾಲದಲ್ಲಿ ಪಾತಾಳಕ್ಕೆ ದಬ್ಬುವನು.

—ಮ. ಪೈಗಂಬರ

ನಿನ್ನ ಕಡುವೈರಿಯು ನಿನ್ನನ್ನು ನೋಡುತ್ತಿರುವಂತೆ ನಿನ್ನ ಅಂತರಂಗವನ್ನು ನೋಡಿಕೊಂಡು ಆತ್ಮಪರೀಕ್ಷೆ ನಡೆಯಿಸಿಕೋ.

ಮಿತ್ರರಲ್ಲಿ ಮತ್ತು ಆಪ್ತೇಷ್ಟರಲ್ಲಿ ಒಡಕು ಹುಟ್ಟಿಸುವವನು ಅತಿ ನೀಚನು.

—ಮ. ಪೈಗಂಬರ

ತಾಳಿದವನು ಬಾಳುವನು.

—ಗಾದೆ

ದೇವರು ಯಾರನ್ನು ಅಧಿಕಾರಿಯನ್ನಾಗಿ ಮಾಡುವನೋ ಅವನು ತನ್ನ ಪ್ರಜೆಗಳ ಹಿತದ ಕಡೆಗೆ ಲಕ್ಷ್ಯ ಪೂರೈಸಬೇಕು; ಹೀಗೆಮಾಡದೆ ಹೋದಲ್ಲಿ ಅಂಥವನಿಗೆ ದೇವರು ಸ್ವರ್ಗದ ವಾಸನೆಯನ್ನು ಕೂಡ ಹತ್ತಗೊಡಲಾರನು.

—ಮ. ಪೈಗಂಬರ

ಜನರ ಮನಸ್ಸನ್ನು ತುಳಿಯುವದು ಕರಿಯ ನಾಗರ ಹೆಡೆಯನ್ನು ತುಳಿದಷ್ಟೇ ಅಪಾಯಕಾರಕವು.

—ಗ್ರೈಂ

ಮಾತು ಬಲ್ಲವನಿಗೆ ಜಗಳವಿಲ್ಲ; ಊಟ ಬಲ್ಲವನಿಗೆ ರೋಗವಿಲ್ಲ.

—ಗಾದೆ

ಒದರುತ್ತ ಹೋದರೆ ರಾಗ ಬರುತ್ತದೆ; ಉಗುಳುತ್ತ ಹೋದರೆ ರೋಗ ಬರುತ್ತದೆ.

—ಗ್ರೈಂ

ಜೀವಿಗಳ ಮನನೋಯಿಸುವದೇ ಹಿಂಸೆ; ಆದುದರಿಂದ ಅಹಿಂಸೆ ಪಾಲಿಸಬೇಕಾದರೆ ಪರರಿಗೆ ನೋವನ್ನುಂಟುಮಾಡಬೇಡ.

—ಗಾಂಧಿ

ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲದವನು ಅಲ್ಲಿಯೂ ಸಲ್ಲನಯ್ಯಾ ಕೂಡಲಸಂಗಮದೇವಾ.

—ಮ. ಬಸವೇಶ್ವರ

ಸಾಲವಿಲ್ಲದ ಮನುಜ ಸಾವಿರಾನೆಗಳ ಒಡೆಯ, ಸಾಲವಿರುವವನು ತೊತ್ತಿಗನು; ಲೋಕದೊಳು ಸಾಲವೇ ಶೂಲ ಸರ್ವಜ್ಞ.

—ಸರ್ವಜ್ಞ

ನಿಮ್ಮ ಗುರಿಯು ಸಮಾನವಿರಲಿ, ಭಾವ ಸಮಾನವಿರಲಿ, ಬುದ್ಧಿಯು ಸಮಾನವಿರಲಿ ಅಂದರೆ ನಿಮ್ಮ ಸಹಜೀವನವು ಸುಖಮಯವಾಗುವದು.

—ಮ. ಬಸವೇಶ್ವರ

ಸುಳ್ಳನಾಡಲುಬೇಡ, ಜನರೊಳು ಕಳ್ಳನೆನಿಸಲುಬೇಡ,
ನೀ ವೈಗಳ್ಳನಾಗಲುಬೇಡ ಗುರು ತಾಯಿ ತಂದೆಗಳ ನುಡಿಗೆ.

—ನೈತಿಕೋಕ್ತಿ



ಸರಿಜನರೊಳು ತಾನು ಸಾಧಿಸಿಕಲಿಯದೆ ನಿಲ್ಲಬಾರದು, ಪರರನು ನೋಯಿಸಿ ಪಾತಕಕೆ ತಾ ಗುರಿಯಾಗಿ ಬೀಳಬಾರದು.

—ಮ. ಬಸವೇಶ್ವರ

ವಿನಾಶ ಕಾಲೇ ವಿಪರೀತ ಬುದ್ಧಿ

—ನೀತಿ

ಕೊಲ್ಲೆನಯ್ಯ ಪ್ರಾಣಿಗಳ, ಮೆಲ್ಲೆನಯ್ಯ ಬಾಯಿಚ್ಚೆ,
ಒಲ್ಲೆನಯ್ಯ ಪರಸತಿಯರ ಸಂಗವ! ಬಲ್ಲೆನಯ್ಯ ಮುಂದೆ
ತೊಡಕುಂಟೆಂಬುದ! ಬಳ್ಳದ ಬಾಯಂತೆ ಒಂದೇ ಮನವ ಮಾಡಿ
ನಿಲ್ಲೆಂದು ನಿಲ್ಲಿಸಯ್ಯ ಕೂಡಲಸಂಗಮದೇವಾ.

--ಮ. ಬಸವೇಶ್ವರ

ಮಿಂಚಿ ಹೋದ ಕೆಲಸಕ್ಕೆ ಚಿಂತಿಸಿ ಫಲವಿಲ್ಲ.

—ಗಾದೆ

ಮಿತವ್ಯಯವು ಆದಾಯದ ಒಂದು ಮಾರ್ಗ.

—ನೀತಿ

ಯಥಾ ಪ್ರಜಾ ತಥಾ ಪ್ರಭುತ್ವ.

—ರಾಜನೀತಿ

ಅಸಿತ ಗಿರಿಸಮಂ ಶ್ಯಾತ ಕಜ್ರಲಂ ಸಿಂಧುಪಾತ್ರೆ।
ಸುರತರುವವರ ಶಾಖಾಲೇಖಿನಿ ಪತ್ರಮುರ್ವಿ।
ಅಖಿತಿಯದಿ ಗೃಹೀತ್ವಾಶಾರದಾ ಸರ್ವಕಾಲಂ।
ತದಪಿತವ ಗುಣಾನಾಂ ಈಶಪಾರನ್ನಾಯತಿ॥

ಉಪನಿಷತ್

ಬಡತನವು ಅಗೌರವದಾಯಕವಲ್ಲ; ಆದರೆ ಸೋಮಾರಿತನದಿಂದ ಅಸಹನೆಯಿಂದ, ದುಂದುಗಾರಿಕೆಯಿಂದ, ಅವಿವೇಕತನದಿಂದ ಬಡತನವನ್ನು ತಂದೊಡ್ಡಿಕೊಳ್ಳುವದು ಮಾತ್ರ ಅಗೌರವವು.

—ಮ. ಬಸವೇಶ್ವರ

ಕರ್ತವ್ಯದ ಕಲ್ಪನೆಯಿಲ್ಲದಿದ್ದರೆ ಹಕ್ಕಿಗೆ ಅಸ್ತಿತ್ವವಿಲ್ಲ.

—ಶ್ರೀರಂಗ

ಕಷ್ಟಪಟ್ಟು ಕಲಿಯದೇ ಶ್ರೇಷ್ಠತೆಬಾರದು.

—ಗ್ಯಂ

ಅಸತ್ಯ ವಾಕ್ ನುಡಿಯುವದಕ್ಕಿಂತ ಮೌನಿಯಾಗಿರುವದೇ ಲೇಸು.

—ಗಾದೆ

ವಾಗ್ವೀರನಾಗಬೇಕಾದರೆ ಸದಾ ವಿದ್ವಜ್ಜನರ ಗ್ರಂಥಾವಲೋಕನ ಮಾಡು.

—ಗ್ಯಂ

ಚಾಡಿಗೆ ಆಶ್ರಯ ಕೊಟ್ಟರೆ ಕೇಡನ್ನು ಸ್ವಾಗತಿಸಿದಂತೆ.

—ಗಾದೆ

ಪ್ರವಾಸ ಮಾಡುವದರಿಂದ ಬುದ್ಧಿಯು ನೀರಿನಲ್ಲಿ ಬಿದ್ದ ಎಣ್ಣೆಯಂತೆ ವಿಸ್ತಾರವಾಗುವದು.

-ಗ್ಯಂ

ದೇವನೊಬ್ಬ ನಾಮ ಹಲವು, ಅವನನ್ನು ಹಲವು ರೀತಿಯಿಂದ ಭಕ್ತಿಯಿಂ ನೆನೆದರೆ ನಿಶ್ಚಯವಾಗಿಯೂ ಒಲಿಯುವನು.

—ಗಾಂಧಿ

ದುಃಖಸ್ಯಾನಂತರಂ ಸುಖಂ। ಸುಖದುಃಖ ಸಮಾವೇಶ।
ಸಹಿಷ್ಣು ಪ್ರಮುದಿಷ್ಠತು.

—ಭರ್ತೃಹರಿ

ಅನ್ಯರ ಸ್ತುತಿ ನಿಂದ್ಯೆಗಳನ್ನು ಲೆಕ್ಕಿಸದೆ ಸತ್ಯಪಥದಲ್ಲಿ ಸಾಗುವವನೇ ಧೀರ! ದೊಡ್ಡಿಸ್ತಿಕೆಯ ಮೋಹದಿಂದ ದೂರಾಗುವವನೇ ವೀರ.

—ಲಿನ್‌ಯುಟಾಂಗ್

ಸ್ವರ್ಗವು ತಾಯಿಯ ಪಾದದಡಿಯಲ್ಲಿದೆ.

—ನೀತಿ

ಸಗ್ಗಲೋಕ ಮೃತ್ಯುಲೋಕಗಳೆಂದರೆ ಯಾವವು;
ಸತ್ಯ ನುಡಿಯುವದೇ ಸಗ್ಗಲೋಕ, ಮಿಥ್ಯ ನುಡಿಯುವದೇ
ಮೃತ್ಯುಲೋಕ ಕಾಣಯ್ಯ ಕೂಡಲಸಂಗಮದೇವಾ.

—ಮ. ಬಸವೇಶ್ವರ

ನಾಲಿಗೆಯ ಕಟ್ಟಿದವನು ಕಾಲನಿಗೆ ಮಾರನಹ, ನಾಲಿಗೆಯ
ರುಚಿಯ ಮೇಲಾಡುತಿರುವವನ ಕಾಲ ಹತ್ತಿರವು ಸರ್ವಜ್ಞ.

—ಸರ್ವಜ್ಞ

ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು.

ನಿನಗೆ ವೀರನಪ್ಪೆ ನಿಮ್ಮ ಶರಣರಿಗೆ ವಧುವಪ್ಪೆ.

ಭೂತವಲಿದು ಆತ್ಮನ ಸೋಂಕಿದ ಬಳಿಕ ಭೂತದ ಗುಣವಲ್ಲದೆ
ಆತ್ಮನ ಗುಣವುಂಟೆ?

ಬೇವಿನಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲ್ಲಲು ಬಾರದು.

ಬೆಲೆವೆಣ್ಣಿನಂತೆ ಸೂಳೆತನುಮುಟ್ಟಿ ಅಪ್ಪುವುಳ್ಳಲ್ಲದೆ
ಮನಮುಟ್ಟಿ ಅಪ್ಪಳು.

ಆಚಾರವೇ ಸ್ವರ್ಗ, ಅನಾಚಾರವೇ ನರಕ.

ಕುಲವೊಂದೇ ತನ್ನ ತಾನರಿದಂಗೆ; ಫಲವೊಂದೇ
ಷಡುದರ್ಶನ ಮುಕ್ತಿಗೆ.

ಹುತ್ತಿಗೆ ಏಸುಬಾಯಾದಡೇನು? ಸರ್ಪವಿಪ್ಪುದು ಒಂದೇ ಸ್ಥಾನ.

—ಮ. ಬಸವೇಶ್ವರ

ಆಲಸಿವುಳ್ಳವನಿಗೆ ಕಲಸಂಬಲಿಯಿಲ್ಲ, ಆಲಸಿಯ ತೊರೆದವಗೆ
ಬೇರಿಂದ ಹಲಸು ಕಾತಂತೆ ಸರ್ವಜ್ಞ

—ಸರ್ವಜ್ಞ

ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡಬೇಕು, ಇಲ್ಲವಾದರೆ
ಪಾಶ್ಚಾತ್ತಾಪಕ್ಕೆ ಗುರಿಯಾಗಬಹುದು.

—ನೀತಿ

ಕಾಡುವದು ಕೇಡಿಗಲ್ಲ, ಬೇಡುವದು ಕೇಡಿಗಲ್ಲ,
ಕಾಡುವದು ಬೇಡುವುದಕೆ ಬೇಡವೇನಬೇಡ.

—ಗ್ರಂ

ಜ್ಞಾನವೇ ಧನವು.

ಅನುಕರಣವು ಅವಶ್ಯವಾದದ್ದು, ಆದರೆ ಆದರ
ಅನಾದರಗಳನ್ನು ಅನುಲಕ್ಷಿಸು.

—ಗ್ರಂ

ಉದ್ಯೋಗವೇ ಬಂಧು, ಆಲಸ್ಯವೇ ಶತ್ರು.

—ಗಾದೆ

ಮುಂದೆ ಭಲಾಯೆಂದು, ಹಿಂದೆನಿಂದಿಪರನು ಕೂಡಬಾರದು.

—ಕನಕದಾಸ

ಬೆಳಗಿನೊಳು ಬೇಗೆದ್ದು ಮುಖವನು ತೊಳೆದುಕೊಳ್ಳೆ ನೀನು
ಪ್ರತಿದಿನ ಜಳಕ ಮಾಡುತ್ತುಟ್ಟುಕೊಳ್ಳಲೆ ಮಡಿಯ ಬಟ್ಟೆಗಳ;
ಅಳತೆಗೆಟ್ಟುಣಬೇಡ ಚಳಿಮಳೆಯೊಳಗೆ ಬರಿಮೈಯಿಂದ ತಿರುಗುವ
ದೆಳೆಮಗುವೆ ತರವಲ್ಲ ಬೇನೆಯು ಬಂದು ಸೇರುವದು.

ಶುಭಂ ಭ್ರೂಯಾತ್, ಸತ್ಯಂ ಭ್ರೂಯಾತ್,
ನಭ್ರೂಯಾತ್ ಅಸತ್ಯಮಪ್ರಿಯಂ.

—ಗೀತಾ

ಆದರಿಲ್ಲದ ಅನ್ನ ಅಮೃತಾನ್ನವಾದರೇನು, ಮಾದಿಸುವ
ಸತಿ ಸುತ ಸಹೋದರರಿದ್ದು ಫಲವೇನು.

—ಸುಭಾಷಿತ

ಗಯಾವಖ್ತ್ ಫಿರ್ ಹಾಥ ಲೌಟ ಆತಾನಹಿ.

—ಗ್ರಂ

ಹೃದಯವನ್ನು ಕಶ್ಮಲದಿಂದ ಶುದ್ಧಮಾಡಬೇಕಾದರೆ ಉಪವಾಸವು
ರಾಮಬಾಣದಂತಹ ಔಷಧಿಯಾಗಿದೆ.

—ಗಾಂಧಿ

ವಿಧಿಲಿಖಿತವನುಂಟೆ ತಿಳಿದವರಂ।
ಬುಧಿಯು ನಾರೀಜಿ ದಾಂಟಿದವರುಂಟೆ।
ಬುಧಜನರಿದನರಿದರಿದು ನಡೆಯುವರಿದು ಕಾರಣಂ
ಸುಖಿಗಳಾಗಿಹರು.

—ಸುಭಾಷಿತ

ಮರಣಾನಂತರವೇ ಮಾನವನ ನಿಜವಾದ ಶ್ರೇಷ್ಠತೆ
ಗೊತ್ತಾಗುವದು.

—ಗಾಂಧಿ

ಕಾಕಃ ಕೃಷ್ಣಃ ಪಿಕಃ ಕೃಷಃ। ಕೋಭೇದಃ ಕಾಕಯೋಃ
ವಸಂತಕಾಲ ಸಂಪ್ರಾಪ್ತೇ। ಕಾಕಃ ಕಾಕಃ ಪಿಕಃ ಪಿಕಃ

—ಸುಭಾಷಿತ

ಜನಮೆಚ್ಚಿ ನಡೆದುಕೊಂಡರೇನುಂಟು ಲೋಕದಿ,
ಮನಮೆಚ್ಚಿ ನಡೆದುಕೊಳ್ಳುವದೇ ಚಂದವು.

—ಸರ್ವಜ್ಞ ಭೂಷಣ

ವಿಶ್ವಾಸವಿಲ್ಲದೆ ಜಗತ್ತಿನಲ್ಲಿ ಯಾವ ಕಾರ್ಯವೂ ಆಗಲಾರವು,
ಆಗಿಲ್ಲ, ಆಗುವದೂ ಇಲ್ಲ.

—ಗಾಂಧಿ

ಆರಾರ ನೇಮಕ್ಕೆ ಸಂದಿತ್ತು, ಇಚ್ಛಾಭೋಜನಕ್ಕೆ ಕೃತ್ಯವಾಗಿತ್ತು, ಘನಮನವು ಕಂಡಯ್ಯ ಸಂಗನ ಬಸವಣ್ಣ ಗುಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು.

—ಪ್ರಭುದೇವರು

ಬಯಲು ಬತ್ತಲೆಯಾದಡೆ ಹೊದಿಸುವರಿನ್ನಾರು?
ಏರಿ ನೀರು ಕುಡಿದರೆ ಬಿಡಿಸುವರಿನ್ನಾರು? ಮಹಾಮೇರು ನಡೆದರೆ ಪಥಕಿಂಬುಗೊಡುವವರಾರು? ಅರಿದವ ಮರೆದವನಾದಡೆ ಅರಿಕೆಯ ಹೇಳುವವರಾರು? ನಿಮ್ಮ ನಿಜವ ನೀವೇ ಬಲ್ಲಿರಿ; ನಾನಂಜುವೆ ನಿಃಕಳಂಕ ಮಲ್ಲಿಕಾರ್ಜುನಾ.

—ಮೋ. ಮಹದೇವಿ

ಪಿತನ ನಿಜಗುಣದೆ ತೋಷಿಪಸುತನೇ ಸುತಂ.

—ಸುಭಾಷಿತ

ಗುರುವಿಗೆ ತನುಹೋಯಿತ್ತು, ಲಿಂಗಕ್ಕೆ ಮನಹೋಯಿತ್ತು, ಜಂಗಮಕ್ಕೆ ಧನಹೋಯಿತ್ತು, ಇಂತಿ ಎಲ್ಲ ಲಕ್ಷದಲ್ಲಿ ಲಕ್ಷಿಸಿ ನೀವು ಕೈಲಾಸಕ್ಕೆ ಹೋದಿಹಿರೆಂಬ ಕಲ್ಲೆದೆಗೆ ನಾನಂಜುವೆ.

—ಮೋ. ಮಹದೇವಿ

ಮಾರ್ಗದರ್ಶಕನಾದ ಸ್ವಾಮಿಯು ಬಗ್ಗೆ ತನು, ಮನ, ಧನ ವನ್ನರ್ಪಿಸಲು ಸಿದ್ಧನಾಗು.

-ಗ್ರಂ

ಅಲರೊಡಲೊಳಮೃತವಡಗಿದವೋಲ್।
ಸುಜನರೊಡಲೊಳ್ ಸುಧೆಯುಡಗಿಹುದು॥

—ಮ. ಬಸವೇಶ್ವರ

ವಿವೇಕ ಮತ್ತು ವಿವೇಚನೆ ಇವೆರಡೂ ಮಾನವನ ನೆಮ್ಮದಿಯ ವಜ್ರ ಕವಚಗಳು.

—ಪರಮಹಂಸ

ಮನೋ, ಮಧುಕರೋ, ಮೇಘೋ, ಮಾನಿನಿ, ಮದನೋ,
ಮರುತ್! ಮಾ, ಮದೋ, ಮತ್ಸ್ಯೋ, ಮರ್ಕಟೋ,
ಮಕಾರಾ ದಶಚಂಚಲಾ.

—ಮಹಾಭಾರತ

ಆವಕಾರ್ಯವನಾದರೂ ತರಹರದಿಂ ವಿಚಾರಿಸಿ ಮಾಡಬೇಕು.

—ಸುಭಾಷಿತ

ಮುಖಸ್ತುತಿ, ಪರನಿಂದೆ, ಇವುಗಳಿಗೆ ಆಸ್ಪದ ಕೊಟ್ಟೆಯಾದರೆ
ಮಹಾಪಾಪಕ್ಕೆ ಗುರಿಯಾದಿ ಜೋಕೆ?

—ನೀತಿ

ಸುಖ ದುಃಖಗಳು ಕ್ಷಣಿಕವೆಂದು ತಿಳಿ.

—ಸುಭಾಷಿತ

ಸೋಲಿಂಗೆ ಸೊರಗದೆ ಗೆಲವಿಂಗೆ ಹಿಗ್ಗದೆ
ಸೋಲು ಗೆಲವುಗಳ್ ಪುಣ್ಯವಶವೆಂದರ॥

—ಗ್ರಂ

ಆನೆ ನೀರಾಟದೊಳು ಮೀನ ಕಂಡಂಜುವದೇ? ಹೀನ ಮನದವರ
ಬಿರುನುಡಿಗೆ ತತ್ವದಾಜ್ಞಾನಿ ಅಂಜುವನೇ?

— ಸುಭಾಷಿತ

ತನುಜಾನುಜರೊಳು ಕೋಪವ ಹಿಡಿಯದವ ಜಾಣ.

—ನಿಜಲಿಂಗಶತಕ

ವೃಢತಾಂ ಭಿಕ್ಷವ ಬೇಡೆನ್ನೆ, ಮುಖಜೆತಾಂ ತೋಳ್ತಾಗಳೀ
ಪಾಂಡವರ್, ಪಿಡಿದೋಡಂ ತಿರಿದುಣ್ಣರೇ, ಖಳನಕೈಯೊಳ್
ಸಿಕ್ಕಳೆ ಸೀತೆತಾಂ॥
ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರ ನರರ್ಪೂರ್ವದೊಳ್
ಪಡೆದಪ್ಪುಣ್ಣದೆ ಪೋಪರೆ ಹರಹರಾ ಶ್ರೀಚನ್ನಸೋಮೇಶ್ವರಾ.

—ಸೋ. ಶತಕ

ಎಡರಡಸಿದೊಡೆ ಮೃಡನಿನ್ನ ನೆನೆವರೋ ಎಡರಡಸಿದ ವಿಪತ್ತು
ಕಡೆಯಾಗ ಲೊಡನೆ ಮೃಡ, ನಿನ್ನ ನೆಡಹಿಯಾ ಕಾಣರು
ರಾಮನಾಥಾ.

ಒಲೆಯ ಬೂದಿಯ ಬಳಿಯಲು ಬೇಡ, ಒಲೆಯಂತೆ
ಹೂಸಿಕೊಂಡಿಪ್ಪುದು ಹುಸಿ, ಏನುಫಲ? ಮನದಲ್ಲಿ ಲೇಸಿಲ್ಲದನ್ನಕ್ಕ
ಒಂದನಾಡಹೋಗಿ ಒಂಭತ್ತನ್ನಾಡುವ ಡಂಭಾಚಾರರ ನೆಚ್ಚ,
ಕೂಡಲಸಂಗಮದೇವಾ.

—ಮ. ಬಸವೇಶ್ವರ

ಆತ್ಮ ಬುದ್ಧಿ, ಸುಖಂ ಚೈವ.

ಹೊಲೆಯರ ಬಾವಿಯಲೊಂದು ಎಲುಬು ನಟ್ಟಿದ್ದರೆ ಹೊಲೆ-ಹೊಲೆ
ಎಂಬುದೀಲೋಕವೆಲ್ಲಾ, ಹಲು-ವೆಲುವಿದ್ದ ಬಾಯಲ್ಲಿ ಅಲ್ಲದುದ
ನುಡಿದರೆ ಅದು ಹೊಲೆಯರ ಬಾವಿಂದ ಕರಕಷ್ಟಕಾಣಾ
ರಾಮನಾಥಾ.

ವೃಕ್ಷರಕ್ಷಣೆಯೇ ಪ್ರಕೃತಿಶಿಕ್ಷಣವಯ್ಯ
ವೃಕ್ಷರಕ್ಷಣೆಯೇ ರಾಷ್ಟ್ರ ರಕ್ಷಣವಯ್ಯ
ವೃಕ್ಷರಕ್ಷಣೆಯೇ ಆತ್ಮರಕ್ಷಣೆಯೆಂಬುದು ಅರಿಯಯ್ಯ.

—ಗ್ರಂ

ದೇವರು ಜನಸಾಮಾನ್ಯರನ್ನೇ ಹೆಚ್ಚಾಗಿ ಮೆಚ್ಚುತ್ತಾನೆ;
ಅದಕ್ಕೆಂತಲೇ ಅವನು ಅವರನ್ನು ಹೆಚ್ಚಾಗಿ ಸೃಷ್ಟಿ
ಮಾಡಿದ್ದಾನೆ.

—ಏಬ್ರಹಾಂ ಲಿಂಕನ್

ಹೆಣವಿರದೆ ಕುಣಿ ಮುಂದೆ! ಚಣಚಡಕೆ ಎದೆಯೊದೆಯ
ದಿನವು ಹೊಡಕೊಂಬ ನೆಯ್ಯಾರ! ತಾಯಾರ ಹೆಣಕೆ
ಗೋಳಿಡುವ ! ಮರುಳಾರ್‍ಯ!!

—ಮರುಳಾರ್‍ಯ



ಸತ್ತಿಂದ ಕುಣಿಯೊಳಗೆ। ಮತ್ತೆ ಕೊಡ್ರುವದೆಲ್ಲಿ? ।
ಹೊತ್ತುಸಿಕ್ಕಾಗ ಮನದಾಸೆ। ತೀರಿಸುವ ಗೊತ್ತಾಗ
ದೇನು ಮರುಳಾರ್ಯ॥

—ಮರುಳಾರ್ಯ

ನಿಮ್ಮ ಕೀರ್ತಿ! ಅದೇ ಪರಮಾವಧಿ ಸಂಪತ್ತು.

—ಗ್ರ್ಯಂ

ಚಣಚಣಕೆ ಅಳುತಿಹರು। ತುಣುಕು ತಿನ್ನಲು ಇರದೆ।
ಕುಣಿಯಿಂದ ಘೋರ ಕಾಣುವದು। ನೆಯ್ಕಾರ ಮನೆ
ಮಸಣದಂತೆ! ಮರುಳಾರ್ಯ॥

—ಮರುಳಾರ್ಯ

ನಿಸರ್ಗದ ಸರ್ವತೋಪರಿವರ್ತನೆ ಎಂಬುದು ಕೇವಲ-
ಕಾಂಕ್ಷೆಯಷ್ಟೇ ಅಲ್ಲ, ಖಚಿತವದು; ಅದು ಆಗಿಯೇತೀರುವದು.

ಜ್ಯೋತಿರ್ವಿಜಯದಲ್ಲಿ ಅಚಲ ಶ್ರದ್ಧೆಯಿಟ್ಟು ತಮ್ಮ ತಮ್ಮ
ಪರಿವರ್ತನೆಯ ವಿಷಯದಲ್ಲಿ ಜಡವೂ ಪುರುಷಸ್ವರೂಪವೂ
ಒಡ್ಡುವ ಅಡ್ಡಿಆತಂಕಗಳನ್ನು ಸಮಾಧಾನ ಸಮಚಿತ್ತತೆಯಿಂದ
ಎದುರಿಸಿರಿ.

ಒಂದು ಹೊಸಬೆಳಕು ಪೃಥ್ವಿಯಲ್ಲಿ ಹೊರಹೊಮ್ಮಿಯೇ
ಹೊಮ್ಮುವದು.
ಒಂದು ಹೊಸ ಜಗತ್ತು ಒಡಮೂಡಿಯೇ ಮೂಡುವದು;
ಕೊಟ್ಟ ಮಾತುಗಳನ್ನು ಪೂರೈಸಲಾಗಿಯೇ ಆಗುವದು.

—ಅರವಿಂದ

ಹಣವು ಕೈಯೊಳಗಿರದೆ। ಒಣ ಹೆಮ್ಮೆ ಮಾಡುವರು।
ಮಣುಕು ಚಹ ಕುಡಿವ ನೆಯ್ಕಾರ। ಅಣ್ಣಗಳು
ಗುಣವಂತರಲ್ಲ! ಮರುಳಾರ್ಯ।

—ಮರುಳಾರ್ಯ

ಉಣ್ಣಲುಡದಿರ ದೇಹ। ಮಣ್ಣಾ ಹಣತೆಯು ಒಳಗೆ।
ಕಣ್ಣೀರ ಎಣ್ಣೆ ತುಂಬಿಸಿರಿ। ಬೆಳಗಿದರು
ಕಣ್ಣದೀಪವನೇ। ಮರುಳಾರ್ಯ॥

—ಮರುಳಾರ್ಯ

ಕಂಗಳ ಮುಂದಣ ಗೊತ್ತುಹರಿಯದು, ಕಾವ್ಯದ ಮುಂದಣ ಗೊತ್ತುಹರಿಯದು, ಮಾಡಿಹೆನೆಂಬ ಮಾಟ ಕೂಟದ ಚಿತ್ತನಿಂದಲ್ಲದೆ ಸ್ವಸ್ಥವಿಲ್ಲ ಹಾಗಲ್ಲದೆ ಲಿಂಗವ ಕಾಣಬಾರದು ಆಯದಕ್ಕಿಯ ಮಾರಯ್ಯ.

—ಪ್ರಭು

ಸತ್ಯಕ್ಕೆ ಬೆನ್ನು ಕಟ್ಟುವವರು ಸೋಲಿಗೆ ಅಂಜಿದರೆ ಗುಲಾಮರೇ ಸರಿ.

—ಲೊವೆಲ

ದಾನವ ಮಾಡಿದ ವಸ್ತುವನ್ನು ತಿರುಗಿ ತೆಗೆದುಕೊಳ್ಳುವದೆಂದರೆ ಕಕ್ಕಿದ್ದನ್ನು ನೆಕ್ಕಿದಂತೆಯೇ ಸರಿ.

—ಗ್ರಂ

ವಿಚಾರಗಳ ದಾಳಿಯಿಂದ ರಾಷ್ಟ್ರವನ್ನು ಗೆಲ್ಲುವದೇ ನಿಜವಾದ ವಿಜಯ.

—ಲೆನಿನ್

ಜಗಳಗಂಟನೂ ತುಂಟನೂ ಮತ್ತು ಸೆಟೆದು ಸೊಕ್ಕಿನಿಂದ ತಿರುಗುವವನೂ ದೇವಕೋಪಕ್ಕೆ ಗುರಿಯಾಗುವನು.

—ಗ್ರಂ

ನನ್ನ-ಸಂಶಯವನ್ನಲ್ಲ-ಶ್ರದ್ಧೆಯನ್ನು ಯಾವದು ಹೆಚ್ಚು ಮಾಡುತ್ತದೆಯೋ ಅದೇ ನಿಜವಾದ ವಿಜ್ಞಾನ.

—ಸಿ. ವಿ. ರಾಮನ್

ನೀನು ನನ್ನನ್ನು ಬಡಿಯಬೇಕೆನ್ನುವುದಾದರೆ ಬಡಿ;
ಅದಕ್ಕೆ ನಾನೇನೂ ಅಡ್ಡಬರುವುದಿಲ್ಲ; ಆದರೆ ನಾನು
ಏನು ಹೇಳಬೇಕಾಗಿದೆ ಎಂಬುದನ್ನು ಮಾತ್ರ ಮೊದಲು ಕೇಳು.

—ಗ್ರೀಕರಿಂದ

ಸಶಕ್ತರಿಂದಲೇ ಅಹಿಂಸೆಯು ಸಾಧ್ಯ.

—ಗಾಂಧಿ

ಒಳ್ಳೆಯ ಮನುಷ್ಯನು ನೀರಿನಂತೆ ಇರುತ್ತಾನೆ.

—ಚೀನೀಗಾದೆ

ಕಡಲಿ ನಾಳವು ಹಿರಿದು ಕಡಲಿಗಿಂತಲೂ ಮಿಗಿಲು
ಮನಸಿನಾಳ!

—ಕುವೆಂಪು

ಕೆಂಪಿನದಾಸಾಳ ಕೆಂಪುಂಟು ಕಂಪಿಲ್ಲ;
ಕೆಂಪಿನವರಲ್ಲಿ ಗುಣವಿಲ್ಲದೊಡೆ ಕೆಂಪಿರ್ದರೇನು? ಸರ್ವಜ್ಞ.

—ಸರ್ವಜ್ಞ

ರವಿಯಾಕಾಶಕೆ ಭೂಷಣಂ ರಜನಿಗಂ ಚಂದ್ರಂ ಮಹಾಭೂಷಣಂ।
ಕುವರಂ ವಂಶಕೆ ಭೂಷಣಂ ಸರಸಿಗಂಬೋಜಾತಗಳ್ ಭೂಷಣಂ॥
ಹವಿಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ।
ಕವಿಯಾಸ್ಥಾನಕೆ ಭೂಷಣಂ ಹರ ಹರಾ ಶ್ರೀಚನ್ನಸೋಮೇಶ್ವರಾ॥

ಬರೆ ಕಂಡುಕರೆಯದನ, ಬರೆಕುಳ್ಳಿರೆನ್ನದನ ಸರಸಸಜ್ಜನಿಗೆ
ಇಲ್ಲದ ಸಖ್ಯವ ಬೆರಸಲೇ ಬೇಡ, ಸರ್ವಜ್ಞ.

—ಸರ್ವಜ್ಞ

ನಾಹಂ ಕಾಕೋ ಹತೋ ರಾಜನ್।
ಹಂಸೋ ಹಂ ಪವಿತ್ರ ಜಲೇ।
ನೀಜ ಸಂಗಪ್ರಸಾದೇನ ಜನ್ಮಜಾತಂ ನಿರರ್ಥಕಂ॥

—ಸುಭಾಷಿತ

## ವಿದ್ಯಾರ್ಥಿಗಳಲ್ಲಿರಬೇಕಾದ ಅಮೌಲ್ಯವಾದ ಗುಣಗಳು

| | | |
|---|---|---|
| ಶಿಸ್ತು | ಗಟ್ಟಿಮನಸ್ಸು | ಸಮಯನಿಷ್ಠತೆ |
| ಸತತ ಪ್ರಯತ್ನ | ನಿಜವಾದ ಗುರುಭಕ್ತಿ | ಕರ್ತವ್ಯ ದಕ್ಷತೆ |
| ಆಜ್ಞಾಧಾರಕತ್ವ | ಪರಸ್ಪರ ಸಹಕಾರ ಪ್ರೇಮ | ಮೇಲು ಬುದ್ಧಿ |
| ಅಚ್ಚುಕಟ್ಟುತನ | ಸ್ವಚ್ಛತೆ | |

—ಗ್ಯಾಂ

ಜ್ಞಾನವುಳ್ಳವರೊಡಲು ಭಾನುವಿನಂತಕ್ಕು,
ಜ್ಞಾನವಿಲ್ಲದವನ ಬರಿಯೊಡಲು ಹಾಳೂರ ಶ್ವಾನನಂತಕ್ಕು ಸರ್ವಜ್ಞ.

—ಸರ್ವಜ್ಞ

ನಿನ್ನ ಸದ್ಗುಣಗಳನ್ನು ದೈನಂದಿನ ಕಾರ್ಯಗಳಲ್ಲಿ ತೋರಿಸು.

—ಗಾದೆ

ಆನೆ ಬೀದಿಲಿ ಬರಲು ಶ್ವಾನ ತಾ ಬೊಗಳುವದು,
ಶ್ವಾನನಂತಾನೆ ಬೊಗಳಿದರೆ ಆನೆಯ
ಮಾನವೇ ಹಾನಿ ಸರ್ವಜ್ಞ.

—ಸರ್ವಜ್ಞ

ಒಡಲೊಳಗಿರುವದು ವಿದ್ಯೆಯು। ನಡೆದರೆ ತಾ ಭಾರವಲ್ಲ;
ಕಳ್ಳರು ಕದಿಯರ್॥ ಪೊಡವಿಪರು ಮುನಿದುಕೊಳ್ಳರ್।
ಒಡಹುಟ್ಟಿರುವರು ಪಾಲುಬೇಡರು ಎಂದು॥

—ಓರ್ವ ಕನ್ನಡ ಕವಿ

ಮನದಲ್ಲಿ ನೆನೆವವಗೆ ಮನೆಯೇನು? ಮಠವೇನು?
ಮನದಲ್ಲಿ ಶಿವನ ನೆನೆಯದವ ಪರ್ವತದ
ಕೊನೆಯಲ್ಲಿದ್ದರೇನು? ಸರ್ವಜ್ಞ.,

—ಸರ್ವಜ್ಞ



## ವಿದ್ಯಾರ್ಥಿಗಳಲ್ಲಿರಬೇಕಾದ ಅಮೂಲ್ಯವಾದ ಗುಣಗಳು

| | | |
|---|---|---|
| ಶಿಸ್ತು | ಗಟ್ಟಿಮನಸ್ಸು | ಸಮಯನಿಷ್ಠತೆ |
| ಸತತ ಪ್ರಯತ್ನ | ನಿಜವಾದ ಗುರುಭಕ್ತಿ | ಕರ್ತವ್ಯ ದಕ್ಷತೆ |
| ಆಜ್ಞಾಧಾರಕತ್ವ | ಪರಸ್ಪರ ಸಹಕಾರ ಪ್ರೇಮ | ಮೇಲು ಬುದ್ಧಿ |
| ಅಚ್ಚುಕಟ್ಟುತನ | ಸ್ವಚ್ಛತೆ | |

—ಗ್ಯಂ

ಜ್ಞಾನವುಳ್ಳವರೊಡಲು ಭಾನುವಿನಂತಕ್ಕು,
ಜ್ಞಾನವಿಲ್ಲದವನ ಬರಿಯೊಡಲು ಹಾಳೂರ ಶ್ವಾನನಂತಕ್ಕು ಸರ್ವಜ್ಞ.

—ಸರ್ವಜ್ಞ

ನಿನ್ನ ಸದ್ಗುಣಗಳನ್ನು ದೈನಂದಿನ ಕಾರ್ಯಗಳಲ್ಲಿ ತೋರಿಸು.

—ಗಾದೆ

ಆನೆ ಬೀದಿಲಿ ಬರಲು ಶ್ವಾನ ತಾ ಬೊಗಳುವದು,
ಶ್ವಾನನಂತಾನೆ ಬೊಗಳಿದರೆ ಆನೆಯ
ಮಾನವೇ ಹಾನಿ ಸರ್ವಜ್ಞ.

—ಸರ್ವಜ್ಞ

ಒಡಲೊಳಗಿರುವದು ವಿದ್ಯೆಯು। ನಡೆದರೆ ತಾ ಭಾರವಲ್ಲ;
ಕಳ್ಳರು ಕದಿಯರ್॥ ಪೊಡವಿಪರು ಮುನಿದುಕೊಳ್ಳರ್।
ಒಡಹುಟ್ಟಿರುವರು ಪಾಲುಬೇಡರು ಎಂದು॥

—ಓರ್ವ ಕನ್ನಡ ಕವಿ

ಮನದಲ್ಲಿ ನೆನೆವವಗೆ ಮನೆಯೇನು? ಮಠವೇನು?
ಮನದಲ್ಲಿ ಶಿವನ ನೆನೆಯದವ ಪರ್ವತದ
ಕೊನೆಯಲ್ಲಿದ್ದರೇನು? ಸರ್ವಜ್ಞ.,

—ಸರ್ವಜ್ಞ

